

# ಸಿದ್ಧಗಂಗಾ



ಅಕ್ಟೋಬರ್ ೧೯೯೯



ಸೆಪ್ಟೆಂಬರ್ ೨೦ ರಂದು ಬೆಂಗಳೂರಿನಲ್ಲಿ ಪ್ರಗತಿ ಸಹಕಾರ ಬ್ಯಾಂಕಿನ ಬೆಳ್ಳಿಹಬ್ಬ ಸಮಾರಂಭವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ಪಟ್ಟಣ ಸಹಕಾರ ಬ್ಯಾಂಕುಗಳ ಮಹಾಮಂಡಳಿಯ ಅಧ್ಯಕ್ಷರಾದ ಶ್ರೀ ಎಚ್. ಕೆ. ಪಾಟೀಲ್, ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಆರ್. ಸಿ. ಚೆನ್ನಬಸವಯ್ಯ, ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಎಚ್. ಸಿ. ಷಡಕ್ಷರಪ್ಪ ಹಾಗೂ ಶ್ರೀ ಎಂ. ಬಿ. ಪಾಟೀಲ ಅವರು ಉಪಸ್ಥಿತರಿದ್ದರು.



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಸೆನು ಬಸವೇಶ**

# ಸಿದ್ಧಗಂಗಾ

**ಸಂಪುಟ : ೩೫ ಅಕ್ಟೋಬರ್ ೧೯೯೯ ಸಂಚಿಕೆ : ೧೦**


ಪ್ರಧಾನ ಸಂಪಾದಕರು
ಚನ್ನಪ್ಪ ಎರೇಸೀಮೆ

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

ಸಹ ಸಂಪಾದಕರು
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

ಸಲಹಾ ಸಮಿತಿ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಟಿ. ಕೆ. ನಂಜುಂಡಪ್ಪ
ಡಾ. ಎಂ.ಎಸ್. ಚನ್ನಬಸಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

ಸದಸ್ಯರು
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಹುಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

ಮುದ್ರಕರು :
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೬೦೮೭


ಲೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ

## ಒಳಪುಟಗಳಲ್ಲಿ .....



| **ವಿಳಾಸ :** | **ಚಂದಾ ವಿವರ :** |
|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ, | ವಾರ್ಷಿಕ ಚಂದಾ ರೂ. ೬೦. |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ ರೂ. ೫೦೦. |
| ತುಮಕೂರು ಜಿಲ್ಲೆ-೫೭೨ ೧೦೪ | ಬಿಡಿ ಪ್ರತಿ ರೂ. ೫.00 |

## ಪ್ರಜ್ಞಾವಂತ ಮತದಾರನ ಔಚಿತ್ಯಪ್ರಜ್ಞೆ .......

ಆತ್ಮೀಯರೆ,

ಓ, ಚುನಾವಣೆಯ ವಿಷಯವೆ? ಅದಕ್ಕೇನು ಕೇಳುತ್ತೀರಿ ಬಿಡಿ. ಎಲ್ಲರ ರಾಜಕೀಯ ತಜ್ಞರ, ಸಮೀಕ್ಷಾಕಾರರ, ಭವಿಷ್ಯ ನುಡಿದವರ, ಪಣ ಕಟ್ಟಿದವರ - ಒಟ್ಟಿನಲ್ಲಿ ಎಲ್ಲರ ಮಾತುಗಳನ್ನು, ಊಹೆಗಳನ್ನು, ಅಂಬೋಣವನ್ನು ತಲೆಕೆಳಗು ಮಾಡಿದೆ. ಮತಪುರುಷನ ವಿವೇಕ ಗರಿಗೆದರಿ ವಿಹರಿಸಿದೆ. ಒಪ್ತೀರಾ! ಒಪ್ಲೇಬೇಕಲ್ಲವೆ?

ಈಗಾಗಲೇ ನಿಮ್ಮ ಕಿವೀಗೆ ಬಿದ್ದಿರಬೇಕು, ಮೆರೆದು ಮೆಕ್ಕೆಕಾಯಿ ತಿಂದೋರೆಲ್ಲ ನೆಲಕಚ್ಚಿ ಹೋದರಂಬೋದು. ಏನವರ ಸೊಕ್ಕು, ತಲೇನೇ ನಿಲ್ತಿರಲಿಲ್ಲವಲ್ಲ ಅಂತ ಜನ ಅಂದುಕೊಳ್ಳಂಗೆ ಆಯ್ತಲ್ಲ. ಅವರ ಮಾತುಗಳೇನು? ತಾನುಂಟೋ ಮೂರು ಲೋಕವುಂಟೋ ಎಂಬ ಗತ್ತೇನು? ಎಂಬುದಕ್ಕೀಗ ಅವಕಾಶವಾಯ್ತಲ್ಲ. ಪ್ರಜಾಪ್ರಭುತ್ವದಲ್ಲಿದ್ದೇವೆ ಎಂಬ ಗದರು ಬೇಡವೆ? ಮತದಾರನ ಪ್ರಶ್ನೆ. ಸ್ವಾಮಿ ಚುನಾವಣೆ ಬರಬೇಕು ಸ್ವಾಮಿ. ಮನುಷ್ಯ ಎಷ್ಟು ಕೆಳಮಟ್ಟಕ್ಕೆ ಇಳಿತಾನೆ ಎಂಬುದನ್ನು ಕಾಣೋದಿಕ್ಕೆ. ಎಂಥೆಂಥಾ ಪಾಪ ಮಾಡ್ತಾರೆ. ಅಯ್ಯೋ ಬಿಡಿ ನಾನಂದು ನನ್ನ ಬಾಯ್ನಾಕೆ ಹೊಲ್ಸು ಮಾಡಿಕೊಳ್ಳಲಿ. ಅದೇನೋ ಅಂತಾರಲ್ಲ - ಮಾಡಿದೋರ ಪಾಪ ಆಡಿದವರ ಬಾಯಲ್ಲಿ ಅಂತ. ಅಲ್ಲ, ಏನು ಹೇಳುತ್ತಿದ್ದೆ? ಸ್ವಲ್ಪದರಲ್ಲಿ ಹೇಳಿಬಿಡ್ತೀನಿ. ಧರ್ಮ ಕರ್ಮ ಅನ್ನೋದು ಇರಬೇಕ್ ಸ್ವಾಮಿ. ಮಾತಿಗೆ ಹೇಳ್ತೀನಿ ಆಳಿದವರ ಬಡಿವಾರ ಎಷ್ಟು? ಒಳಗೊಳಗೇ ಬಡಿದಾಡಿದ್ದೆಷ್ಟು? ಬೀದಿಗ ಬಂದರಲ್ಲ. ಹಸ್ತ ತೋರಿ ಅವಲಕ್ಷಣ ಅನ್ನಿಸಿಕೊಂಡ್ರಲ್ಲ. ಬೇರೆಯವರಿಗೆ ಅಂಜೋದು ಬೇಡ. ತಮ್ಮ ನೆರಳಿಗೆ ತಾವಂಜ್‌ಬೇಡ್ವೆ? ನಾವ್ ಹಿಂಗೆ ಒಡೆದ್ಹೋಳಾದ್ರೆ ಜನ ಏನಂದ್ಕಂಡಾರ್ ಅನ್ನೋ ಯೋಚ್ನೆ ಮಾಡ್ಲೇ ಇಲ್ವಲ್ಲ. ಹೋಗ್ಲಿ ಬಿಡಿ. ಯಾರ್ ಏನ್ ಹೇಳಿ ಏನ್ ಪ್ರಯೋಜ್ನ. ಮಾಡಿದ್ದುಣ್ಣೋ ಮಹರಾಯ ಅಂತ ಅನುಭವಿಕರು ಸುಮ್ನೆ ಹೇಳಿದ್ದಾ.

ನಮ್ಮ ಕರ್ನಾಟಕದವರ ವಿಷಯ ಕೇಳುತ್ತೀರಾ? ಅವರ ವಿಷಯ ನಾನು ಏನು ತಾನೆ ಹೇಳಲಿ? ನನಗೆ ಕನ್ನಡ ನಾಡಿನವರ ಮನಸ್ಸು ಏನೇನೂ ತಿಳಿಯದು? ಯಾಕಂತೀರಾ? ಯಾವಾಗ ಚುನಾವಣೆ ನಡೆಯಲಿ ಈ ರಾಜ್ಯದವರ ತೀರ್ಮಾನವೇ ಒಂಥರಾ. ಡಿಳ್ಳಿಯಲ್ಲಿ ಯಾವ ಸರ್ಕಾರ ಬರುತ್ತೋ ಅದಕ್ಕೆ ಭಿನ್ನವಾದ ಸರ್ಕಾರವೇ ಇಲ್ಲಿ ವಿಧಾನಸೌಧದ ಮೆಟ್ಟಿಲು ಹತ್ತುವುದು. ಅದರಿಂದಾಗಿ ರಾಜ್ಯ ಎದುರಿಸುವ ಸವಾಲು, ಸಮಸ್ಯೆಗಳು ಮುಗಿಲಾಗೆ ಚುಕ್ಕಿ ಎಣಿಸಿದ್ಹಾಂಗ. ಇದೀಗ ಘಟಾನುಘಟಿಗಳೆಲ್ಲ ನೆಲದಲ್ಲಿ, ಗೆದ್ದವರು ಆಕಾಶದಲ್ಲಿ. ಅಲ್ಲಾ ದೇವ್ರೂ, ಚುನಾವಣೆ ಸಂದರ್ಭದಲ್ಲಿ ಸ್ವದೇಶಿ-ವಿದೇಶಿ ಅಂದ್ರು, ಸ್ಥಿರ-ಅಸ್ಥಿರ ಅಂದ್ರು, ಜಾತಿ ಕೋಮು ತಂದ್ರು, ಈ ಜಾತಿಪಾತಿ ಹೋಗುತ್ತೆ ಅಂತೀರಾ? ಜಾತಿ ಇರಬಾರದು ಅನ್ನೋರೇ ಜಾತಿ ಹುಡ್ಕೋದ್ನ ಬಿಡೋತನ್ಕ ಜಾತಿ ಎಲ್ಹೋಗುತ್ತೆ? ನೀವಾದ್ರೂ ಹೇಳಿ. ಜಾತಿ ಹೋದ್ರೆ ಪ್ರಪಂಚಾನೇ ನಾಶಾ ಆಗತ್ತಂತೆ ಹೌದಾ? 'ಪಾಂಚಜನ್ಯ' ಮೊಳಗಿಸಿದ ಕೃಷ್ಣ ಇದೀಗ ಕರ್ನಾಟಕದ ಐದುಕೋಟಿ ಕನ್ನಡಿಗರ ಕಣ್ಮಣಿ. ರಾಜ್ಯದ ರಥ ಮುನ್ನಡೆಸುವ ಭಾರ ಹೊತ್ತ ಧೀಮಂತ, ಒಳಿತಾಗಲಿ.

ಬದುಕೋ ಮನುಷ್ಯ ತನ್ನ ಪಾಡು ತಾನು ನೋಡಿಕೋಬೇಕು. ಹೌದೋ ಅಲ್ವೋ? ತಪ್ಪಿದ್ದರೆ ಹೇಳಿ. ಆದ್ರೆ ನ್ಯಾಯ, ಧರ್ಮ, ನೀತಿ, ಮಾನವೀಯತೆ ಬಿಡ್‌ಬಾರ್ದು ಅಲ್ವೇ? ಒಪ್ತೀರಾ.

ಅಲ್ಲ, ನಮ್ ಪ್ರಧಾನಿಗಳು ಚಿನ್ನದಂಥವರು ಅನ್ನೋದ್ ಸುಳ್ಳೇ. ಅವರ್ಗೇನ್ ಹೆಂಡ್ರೇ? ಮಕ್ಳೇ? ಅವರ್ಮುಂದೆ ದೇಶಾನೇ ಇರುವಾಗ. ಮೊನ್ನೆ ಚುನಾವಣೇಲಿ ಗೆದ್ಮೇಲೆ ಎಂಥ ಮಾತಾಡಿದರು! "ಚುನಾವಣೆ ಪ್ರಚಾರ ಸಮಯದಲ್ಲಿ ಆಡಿದ್ದನ್ನೆಲ್ಲಾ ಮರ್ತು, ದೇಶದ ಒಳಿತಿಗೆ ದುಡಿಯೋಣ" ಅಂದ್ರಲ್ವೇ. ತುಂಬಾ ತೂಕದ ವ್ಯಕ್ತಿತ್ವ ಅನ್ನಲ್ವೇ. ಅವರ ಅನುಭವ, ಮುತ್ಸದ್ದಿತನ ದೇಶಕ್ಕೀಗ ಅನಿವಾರ್ಯ ಅಗತ್ಯ ಅನ್ನೋ ತಿಳಿದೋರ ಮಾತು ಬೆಳ್ದಿಂಗಳು ಚೆಲ್ಲುವಂತಾಗಲಿ ಎಂದು 'ಸಿದ್ಧಗಂಗಾ' ಹಾರೈಸೋದ್ರಲ್ಲಿ ಸಂತೋಷ ಕಾಣುತ್ತೆ.

ಸಂಪಾದಕ





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಪಂಚಸೂತಕ ಕಳೆದ ಪಂಚ ಪರುಷಮೂರ್ತಿ
ಪಂಚಾನನ ಪಾವನ ವರಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೂತಕವ ಕಳೆದೊಗೆದು ಸೂಕ್ತ ತಿಳಿವನು ನೀಡಿ
ಪ್ರೀತಿಗಂಗೆಯಲಿ ಮಡಿಮಾಡಿ । ಸಲಹಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸುರತರುವೆ ಸುರಧೇನೆ ಗುರುವೆ ಪರಮೇಶ್ವರನೆ
ಪರಮ ನಿರಂಜನನೆ ಜಂಗಮವೆ । ನನ್ನ ತಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಯತವೆ ಸ್ವಾಯತವೆ ಸನ್ನಿಹಿತ ಲಿಂಗವೆ
ಪ್ರಾಣ ಭಾವವ ತುಂಬಿ ನಿಂದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸತ್ಯ ಸದಾಚಾರ ನಿತ್ಯ ನಿಜಾಚಾರ
ಸ್ತುತ್ಯ ಭೃತ್ಯಾಚಾರ ಕಲಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರು ಲಿಂಗ ಜಂಗಮವೆ ತನುಮನ ಪ್ರಾಣವೆ
ಅರಿವು ಆಚಾರಗಳ ವರಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯ ಕರಗುವ ಮುನ್ನ ಜೀವ ಮುಗಿಯುವ ಮುನ್ನ
ದೀಪ ಆರುವ ಮುನ್ನ ಹಾಡುವೆನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕತ್ತಲೆಯ ಕರುನಾನು ಬೆಳಕಿನ ಸಿರಿ ನೀನು
ಮಿಥ್ಯನಾಗಿಹೆ ನಾನು ಸತ್ಯ ನೀನು । ನನ್ನ ತಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸರ್ವಾಂಗ ಶ್ರೀ ಶಿವವೆ ಸರ್ವಶ್ರೀ ಜಂಗಮವೆ
ಶರ್ವ ಶುಭ ಶಂಭುವೆ ಶ್ರೀವಿಭುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

-- ಹೆಚ್. ವಿ. ವೀರಭದ್ರಯ್ಯ



## ಶ್ರೀ ವಾಣಿ

### ಇಲ್ಲಿ ಸಲ್ಲುವ ಕಲೆ

ಸೇವೆ, ತ್ಯಾಗ, ಮಾನವೀಯತೆಗಳನ್ನು ಬಿತ್ತಿದವರು ಧರ್ಮ ದೀಪಕರು. ಅವರು, ಸಾರ್ವಕಾಲಿಕ ಸ್ಮರಣೀಯರು. ಅವರ ಸಾಲಿನಲ್ಲಿ ಬಸವಣ್ಣನವರೂ ಒಬ್ಬರು. ಅವರು ತುಳಿದ ಹಾದಿ ವಿಶಿಷ್ಟವಾದದ್ದು, ವಿಚಾರಪೂರ್ಣವಾದದ್ದು. ಆಚಾರ ಸಮನ್ವಿತವಾಗಿ ವಿನೂತವೆನಿಸಿದ್ದು. ಬಸವಣ್ಣನವರು ಬಿತ್ತಿದ್ದು, ಬೆಳೆದದ್ದು ಕ್ರಿಯಾಜ್ಞಾನಸಮನ್ವಿತವಾದ ಮಾನವಧರ್ಮ. ಅದು ಅಷ್ಟಕ್ಕೇ ಸೀಮಿತವಾಗಲಿಲ್ಲ. **'ಸಕಲ ಜೀವರಿಗೆ ಲೇಸನೇ ಬಯಸುವ'** ವಿಶ್ವಧರ್ಮವಾಯಿತು.

ಇಂದು ವಿಜ್ಞಾನ 'ಜಗದಗಲ ಮುಗಿಲಗಲ' ಬೆಳೆಯುತ್ತಿದೆ, ನರ್ತಿಸುತ್ತಿದೆ. ಹೊಸ ಹೊಸ ಸಂಶೋಧನೆಗಳ ಆವಿಷ್ಕಾರವಾಗುತ್ತಿದೆ. ಊಹಿಸಲೂ ಅಸಾಧ್ಯವೆನಿಸುವ ಪ್ರಗತಿ ಕಾಣುತ್ತಿದೆ. ಆದರೆ ವಿನಾಶ ಮುಖಿಯಾಗುತ್ತ ನಡೆದಿದ. ಜ್ಞಾನ-ವಿಜ್ಞಾನ-ತಂತ್ರಜ್ಞಾನಗಳೆಲ್ಲ 'ಆತ್ಮಜ್ಞಾನ'ವನ್ನು ತಿಳಿಯುವುದಕ್ಕೆ ಸಹಾಯಕವಾಗಬೇಕು. 'ಬಾಂಬು'ಗಳ ನಿರ್ಮಾಣದಿಂದ ಲೋಕಕ್ಕಾಗುವ ಕಲ್ಯಾಣವಾದರೂ ಯಾವುದು?

ಪರಮಾತ್ಮನನ್ನು ನಂಬಲು ವಿಜ್ಞಾನ ಮಾಧ್ಯಮವಾಗಬೇಕು. ಏಕೆಂದರೆ 'ವಿಜ್ಞಾನಿ' ಎಂದೂ ಸೃಷ್ಟಿಕರ್ತನಾಗಲಾರ. ಸೃಷ್ಟಿಯಲ್ಲಿ ನಿಕ್ಷೇಪವಾಗಿರುವ 'ಭಗವದ್ನಿಧಿ'ಯನ್ನು ಅನಾವರಣಗೊಳಿಸಬಲ್ಲನಷ್ಟೆ. ಮಾನವನ ಜೀವಿತಾವಧಿ ಹೆಚ್ಚೇನಲ್ಲ. ಇರುವಷ್ಟು ಕಾಲ ಆನಂದವನ್ನನುಭವಿಸುವ, ಆನಂದವನ್ನು ನೀಡುವ 'ಆನಂದಮಯ ಈ ಜಗಹೃದಯ' ಎಂಬ ಕವಿ ವಾಣಿಯನ್ನು ಅರಿಯುವವನಾಗಬೇಕು. ಏಕೆಂದರೆ ಪ್ರಪಂಚವೆಂಬುದೊಂದು ತಪೋರಂಗ, ಕರ್ಮಕ್ಷೇತ್ರ, ಸಾಧನಾ ಕಮ್ಮಟ. ಯಾರೇ ಆಗಲಿ ತನ್ನಲ್ಲಿ ಅಡಗಿರುವ ಶಕ್ತಿಯನ್ನು ಚಾಲನಗೊಳಿಸಬೇಕು. ಅದರ ಸದುಪಯೋಗ ಪಡೆದುಕೊಂಡು ಇತರರಿಗೂ ನೀಡುವುದಾಗಬೇಕು.

ಇತ್ತೀಚಿನ ದಿನಗಳಲ್ಲಿ 'ಆಲಸ್ಯ' ಜೀವನ ನಾಗರಿಕತೆಯ ಲಕ್ಷಣವಾಗುತ್ತಿದೆ. ಸದ್ಭಾವನೆಯ ಬದುಕು ಎಂದರೆ ಕ್ರಿಯಾಶೀಲ ಜೀವನ ಅಪರೂಪವಾಗುತ್ತಿದೆ. ಇದರಿಂದಾಗಿ ಕುಟುಂಬಗಳು, ಸಮಾಜ, ದೇಶ ದಾರಿದ್ರ್ಯದ ಕಹಿಯನ್ನುಣ್ಣುವಂತಾಗಿದೆ. ಜನನಾಯಕರು ಕೇವಲ 'ಓಟು ಬ್ಯಾಂಕು'ಗಳ ಸಂಸ್ಥಾಪನೆ, ಸಂವರ್ಧನೆ, ಸಮರ್ಪಣೆಯಾಗದ ಹೊರತು ಭವಿಷ್ಯವಾದರೂ ಎಂತು ಸಾಧ್ಯ?

**(ದಿನಾಂಕ 19.9.1999ರಂದು ಕಡೂರು ತಾಲ್ಲೂಕು ಬಾಸೂರು ಗ್ರಾಮದಲ್ಲಿ ಆಚರಿಸಲಾದ ಗ್ರಾಮಾಂತರ ಬಸವ ಜಯಂತಿ ಸಮಾರಂಭದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹಿತ)**

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

ಅಂತರಂಗದಲ್ಲಿ ಆರುಹು ಪೂರ್ಣವಾಗಿ
ಬಹಿರಂಗದಲ್ಲಿ ಸತ್ಕ್ರಿಯಾ ಸಂಪನ್ನನಾದ ಸಚ್ಚರಿತನು
ನೋಡಾ ಭಕ್ತನು
ತನು ಮನ ಭಾವದಲ್ಲಿ ಇಷ್ಟ ಪ್ರಾಣ ಭಾವವ ನಿಲಿಸಿ
ತನು ಮನ ಭಾವರಹಿತನಾಗಿ ನಿರ್ದೇಹಿ ನೋಡಾ ಭಕ್ತನು
ಕ್ರಿಯೆ ಜ್ಞಾನ ಭಾವಲಿಂಗವ ಮುಟ್ಟಿ ಹಿಮ್ಮೆಟ್ಟಿದ
ನಿಭ್ರಾಂತನಯ್ಯಾ ನಿಮ್ಮ ಭಕ್ತನು
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ !

ಜ್ಞಾನವೊಂದೇ ಸಾಕು, 'ಜ್ಞಾನಾದೇವತು ಕೈವಲ್ಯಂ' ಎಂದು ವೇದಾಂತ ಹೇಳುವುದು. ಆದರೆ ಕ್ರಿಯಾಜ್ಞಾನಗಳ ಸುಂದರ ಸಮನ್ವಯದಲ್ಲಿ ಜೀವನ ಪೂರ್ಣತೆ ಇರುವುದು ಎಂಬುದು ಅನುಭವಿಗಳ ಮತ. ಒಳಗೆ ಜ್ಞಾನ, ಹೊರಗೆ ಕ್ರಿಯೆಗಳನ್ನು ಅಳವಡಿಸಿಕೊಂಡವನೇ ಪರಿಪೂರ್ಣ ಭಕ್ತನಾಗುವನು. ಶರಣನು ತನ್ನ ತನು ಮನ ಭಾವಗಳಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳನ್ನು ಧರಿಸಿ, ಅವುಗಳ ಪ್ರಾಕೃತಿಕ ಸ್ಥಿತಿಯನ್ನು ಕಳೆದುಕೊಂಡು ನಿಭ್ರಾಂತ ಶರಣನಾಗುವನು. ಭ್ರಾಂತಿಯೇ ಎಲ್ಲ ಅನರ್ಥಗಳ ಮೂಲ. ಅದಿಲ್ಲದವರೇ ಸುಖಿಗಳಾಗುವರು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋಂ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ನೂತನ ಪ್ರಧಾನಮಂತ್ರಿ
## ಶ್ರೀ ಅಟಲ್ ಬಿಹಾರಿ ವಾಜಪೇಯಿ



ಭಾರತದ ಹಿರಿಯ ರಾಜಕಾರಣಿ, ರಾಜಕೀಯ ಮುತ್ಸದ್ದಿ, ಅನುಭವಿ, ದಕ್ಷ ಆಡಳಿತಗಾರ, ಸರಳತೆ ಮತ್ತು ಸಜ್ಜನಿಕೆಯನ್ನು ಮೈಗೂಡಿಸಿ ಕೊಂಡಿರುವ ಶ್ರೀ ಅಟಲ್ ಬಿಹಾರಿ ವಾಜಪೇಯಿ ಅವರು ಭಾರತದ ನೂತನ ಪ್ರಧಾನಿಗಳಾಗಿ ಆಯ್ಕೆಯಾದುದಕ್ಕೆ 'ಸಿದ್ಧಗಂಗಾ' ಅಭಿನಂದನೆಗಳನ್ನು ಹಾಗೂ ಶುಭ ಹಾರೈಕೆಗಳನ್ನು ಸಲ್ಲಿಸುತ್ತದೆ. ಶ್ರೀ ವಾಜಪೇಯಿ ಅವರು ತಮ್ಮ ಅಧಿಕಾರಾವಧಿಯಲ್ಲಿ ದೇಶವನ್ನು ಅಭಿವೃದ್ಧಿ ಪಥದತ್ತ ಮುನ್ನಡೆಸುವ ಶಕ್ತಿಯನ್ನು ದಯಾಮಯನಾದ ಭಗವಂತನು ಕರುಣಿಸಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

## ನೂತನ ಮುಖ್ಯಮಂತ್ರಿಯಾಗಿ
## ಶ್ರೀ ಎಸ್. ಎಂ. ಕೃಷ್ಣ



ದಕ್ಷತೆಗೆ, ಪ್ರಾಮಾಣಿಕತೆಗೆ, ನೇರ ನುಡಿಗೆ ಹೆಸರಾಗಿರುವ; ನಾಡು-ನುಡಿಯ ಬಗ್ಗೆ ಅಪಾರ ಕಳಕಳಿಯಿರುವ ಶ್ರೀ ಎಸ್. ಎಂ. ಕೃಷ್ಣ ಅವರು ರಾಜ್ಯದ ೧೬ನೇ ಮುಖ್ಯಮಂತ್ರಿಯಾಗಿ ರಾಜ್ಯದ ಆಡಳಿತದ ಸೂತ್ರವನ್ನು ಹಿಡಿದಿರುವುದು ಅವರ ರಾಜಕೀಯದ ಅಪಾರ ಅನುಭವ ಹಾಗೂ ಸೇವೆಗೆ ಸಂದ ಗೌರವ. ರಾಜ್ಯದ ಉನ್ನತ ಸ್ಥಾನವನ್ನು ಅಲಂಕರಿಸಿರುವ ಶ್ರೀ ಎಸ್.ಎಂ. ಕೃಷ್ಣ ಅವರು ತಮ್ಮ ಆಡಳಿತಾವಧಿಯಲ್ಲಿ ರಾಜ್ಯ ಹಲವಾರು ಪ್ರಗತಿಪರ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವಂತಾಗಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ ಹಾಗೂ ಅಭಿನಂದನೆಗಳನ್ನು ಸಲ್ಲಿಸುತ್ತದೆ.





# ಬಾಗಿದ ತಲೆ ಮಾಗಿದ ದೇಹ

ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು,
ಶ್ರೀ ತರಳಬಾಳು ಜಗದ್ಗುರು, ಬೃಹನ್ಮಠ, ಸಿರಿಗೆರೆ-೫೭೭ ೫೪೧.

ನಮ್ಮಲ್ಲಿ ಮಠ-ಪೀಠಗಳಿಗೆ, ಗುರು-ವಿರಕ್ತರಿಗೆ, ಜಗದ್ಗುರುಗಳಿಗೆ ಕೊರತೆಯಿಲ್ಲ. ಮಠಗಳು ಏನು ಮಾಡುತ್ತಿವೆ? ಅಲ್ಲಿರುವ ಮಠಾಧೀಶರು ಹೇಗೆ ಬದುಕುತ್ತಿದ್ದಾರೆ ಎಂಬ ಇತಿಹಾಸವನ್ನು ಹೆಕ್ಕಿ ತೆಗೆದರೆ ವಿಸ್ಮಯವನ್ನುಂಟುಮಾಡುವ ಆಶ್ಚರ್ಯಕರ ಸಂಗತಿಗಳು ಹೊರಬರುತ್ತವೆ. ತಮ್ಮ ಸಚ್ಚಾರಿತ್ರ್ಯ, ಸತ್ಕಾರ್ಯಗಳಿಂದ ಮಠದ ಘನತೆ, ಗೌರವ ಎತ್ತಿ ಹಿಡಿಯುವವರು ಕೆಲವು ಸ್ವಾಮಿಗಳಾದರೆ, ದುರ್ನಡತೆ, ದುಷ್ಕಾರ್ಯಗಳಿಂದಾಗಿ ಮಠದ ಕೀರ್ತಿಗೆ ಕಲಂಕ ತರುವ ಸ್ವಾಮಿಗಳೂ ಕಂಡುಬರುತ್ತಾರೆ. ಹೀಗಾಗಿ ಮಠ-ಪೀಠಗಳ, ಅಲ್ಲಿರುವ ಸ್ವಾಮಿಗಳ ಬಗೆಗೆ ಅಭಿಮಾನದ ಮಾತುಗಳು ಕೇಳಿಬಂದಂತೆ, ಮಠ, ಸ್ವಾಮಿಗಳೆಂದರೆ ಮೂಗು ಮುರಿಯುವ, ಹಗುರವಾಗಿ ಮಾತನಾಡುವ ವಾತಾವರಣವೂ ಇದೆ. ಇದಕ್ಕೆ ಕಾರಣ ತಮ್ಮ ಹೊಣೆಯರಿತು ತಮ್ಮ ಇತಿಮಿತಿಯೊಳಗೆ ಪ್ರಗತಿಪರ ಇಲ್ಲವೇ ಜನ ವಿರೋಧಿ ಕಾರ್ಯಗಳಲ್ಲಿ ಸ್ವಾಮಿಗಳಾದವರು ನಿರತರಾಗಿರುವುದು. ಜನಮನ್ನಣೆ ಪಡೆದು, ಜೀವನ ಪ್ರೀತಿಯೊಂದಿಗೆ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಏಳಿಗೆಗಾಗಿ ದುಡಿಯುತ್ತಿರುವ ಬೆರಳೆಣಿಕೆಯ ಮಠಾಧೀಶರಲ್ಲಿ ಸಿದ್ಧಗಂಗೆಯ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಎಲ್ಲ ವರ್ಗದ ಭಕ್ತಿ ಗೌರವಗಳಿಗೆ ಅರ್ಹರಾಗಿದ್ದಾರೆ. ಅವರನ್ನು ಕಂಡವರು, ಮಾತನಾಡಿದವರು ಎಂದೂ ಮರೆಯಲಾರದಂಥ ಭವ್ಯ ವ್ಯಕ್ತಿತ್ವ ಪೂಜ್ಯರದು.

**ಅನ್ನವನು ಇಕ್ಕುವುದು, ನನ್ನಿಯನು ನುಡಿಯುವುದು**
**ತನ್ನಂತೆ ಪರರ ಬಗೆದೊಡೆ ಕೈಲಾಸ**
**ಬಿನ್ನಾಣವಕ್ಕು ಸರ್ವಜ್ಞ**

ಕರ್ನಾಟಕದಲ್ಲಿರುವ ಬಹುತೇಕ ಮಠಗಳು ಸರ್ವಜ್ಞನ ಆಶಯದಂತೆ ನಡೆಯುತ್ತಿವೆ ಎಂದರೆ ಅತಿಶಯೋಕ್ತಿ ಏನಲ್ಲ. ಅನೇಕ ಮಠಗಳು ಅನ್ನದಾಸೋಹದ ಜೊತೆಗೆ ಜ್ಞಾನದಾಸೋಹವನ್ನು ಉಣಬಡಿಸುತ್ತ ಜನರ ಸಾಂಸ್ಕೃತಿಕ ಸಂಪತ್ತನ್ನು ಬೆಳೆಸಲು ನಿರಂತರವಾಗಿ ಪ್ರಯತ್ನಿಸುತ್ತಿವೆ. ಅದರಲ್ಲಿಯೂ ಲಿಂಗವಂತ ಮಠಾಧೀಶರಲ್ಲಿ ಕೆಲವರು ಜನಸೇವೆಯೇ ಜನಾರ್ಧನ ಸೇವೆ, ಜನರ ನೋವಿನ ನಿವಾರಣೆಯೇ ಶಿವಪೂಜೆ ಎಂದು ಭಾವಿಸಿ ಸೇವೆಯಲ್ಲಿಯೇ ಶಿವನನ್ನು ಕಾಣುತ್ತಿದ್ದಾರೆ. ತಮ್ಮ ಸೇವೆಯ ಮೂಲಕ ಸಹಸ್ರ ಸಹಸ್ರ ಜನರ ಬಾಳಿಗೆ ಬೆಳಕು ಕರುಣಿಸುತ್ತಿದ್ದಾರೆ. ಮಠಗಳೇ ಇಲ್ಲದಿದ್ದಲ್ಲಿ ಗ್ರಾಮೀಣ ಪ್ರದೇಶದ ಬಹುತೇಕ ಬಡವರು ವಿದ್ಯೆಯಿಂದ ವಂಚಿತರಾಗಿ ಪಶುಗಳಂತೆ ಬಾಳಬೇಕಾಗಿತ್ತು. ಅವರಿವರ ಮಾತೇಕೆ? ಶ್ರೀ ತರಳಬಾಳು ಬೃಹನ್ಮಠದ ದೈಹಿಕವಾಗಿ ನಮ್ಮಿಂದ ಕಣ್ಮರೆಯಾಗಿರುವ ಪೂಜ್ಯ ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳವರ ಕೃಪಾಶೀರ್ವಾದ ದೊರೆಯದಿದ್ದರೆ ಇಂದು ನಾವು ಎಲ್ಲಿ ಹೇಗೆ ಬದುಕುತ್ತಿದ್ದೆವೆಂದು ಹೇಳಲಾಗದು. ಈ ದಿಸೆಯಲ್ಲಿ ಸಿದ್ಧಗಂಗೆಯ ಪೂಜ್ಯ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸಹ ಸುದೀರ್ಘ ಬದುಕಿನಲ್ಲಿ ಬಹು ಜನರಿಗೆ ಬೆಳಕು ನೀಡಿದ್ದಾರೆ. ದಾರಿ ತೋರಿದ್ದಾರೆ. ಕೈಹಿಡಿದು ಮುನ್ನಡೆಸಿದ್ದಾರೆ. ಈಗಲೂ ಆ ಕಾರ್ಯವನ್ನು ಗೌರವದಿಂದ ಮುಂದುವರಿಸಿದ್ದಾರೆ.

ಸಿದ್ಧಗಂಗಾ ಎನ್ನುತ್ತಲೇ ನಮ್ಮ ಕಣ್ಮುಂದೆ ನಿಲ್ಲುವ ಚಿತ್ರ ಕಾವಿಯ ನಿಲುವಂಗಿ ಧರಿಸಿರುವ; ತಲೆಗೆ ಕಾವಿಬಣ್ಣದ ಪೇಟ ಸುತ್ತಿರುವ, ಹಣೆಯ ತುಂಬ ಎದ್ದುಕಾಣುವಂತೆ ವಿಭೂತಿ ಹಚ್ಚಿರುವ, ಸದಾ ಕಣ್ಮುಚ್ಚಿ ಕುಳಿತಿರುವ, ಎತ್ತರದ ಆಳಾದರೂ ವಯೋಮಾನದಿಂದ ಬಾಗಿರುವ ಶ್ರೀ ಶಿವಕುಮಾರ ಮಹಾಸ್ವಾಮಿಗಳವರದು. ತಮ್ಮಲ್ಲಿಗೆ ಬಂದವರ ವಯಸ್ಸು, ಜಾತಿ, ಲಿಂಗ, ಅಧಿಕಾರ, ಅಂತಸ್ತು ನೋಡದೆ ಪ್ರೀತಿಯಿಂದ ಮಾತನಾಡಿಸುವ ತಾಯಿಯ ಹೃದಯ ಅವರದು. ಜನರ ಸಮಸ್ಯೆಗಳನ್ನು ಸಮಾಧಾನದಿಂದ ಕೇಳುವ, ಸಾಂತ್ವನದ ಮಾತನಾಡುವ, ಸಹಾಯ ಮಾಡುವ ಅವರ ಜೀವನ ವಿಧಾನವನ್ನು ಸಿದ್ಧಗಂಗಾ ಶ್ರೀಮಠದಲ್ಲಿ ಒಂದೆರಡು ಸಂದರ್ಭಗಳಲ್ಲಿ ಖುದ್ದಾಗಿ ಕಂಡಿದ್ದೇವೆ. ಎಂದೂ ಉದ್ವೇಗಕ್ಕೆ ಒಳಗಾಗದೆ ಶಾಂತಚಿತ್ತರಾಗಿ ಗ್ರಾಮೀಣ ಜನರ ಬದುಕಿಗೆ ಸ್ಪಂದಿಸುವ ಪೂಜ್ಯರು ಸರ್ವಮತೀಯರ ಭಕ್ತಿ, ಪ್ರೀತಿ, ಗೌರವಗಳಿಗೆ ಪಾತ್ರರಾಗಿದ್ದಾರೆ. ಇದಕ್ಕೆ ಇತ್ತೀಚೆಗೆ ನಡೆದ ಅವರ ಪಟ್ಟಾಧಿಕಾರದ ವಜ್ರಮಹೋತ್ಸವವೇ ಸಾಕ್ಷಿಯಾಗಿದೆ.

### ಅನ್ನ ಮತ್ತು ಜ್ಞಾನ ದಾಸೋಹ

ಲೋಕಕಲ್ಯಾಣವೇ ಆತ್ಮಕಲ್ಯಾಣಕ್ಕೆ ದಾರಿ ಎಂದು ಭಾವಿಸಿರುವ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಸೇವಾವಧಿಯಲ್ಲಿ ಗಮನಾರ್ಹವಾದ ಅದ್ಭುತ ಕೆಲಸಕಾರ್ಯಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಬಹು ಮುಖ್ಯವಾದವು. ಅನ್ನದಾಸೋಹ ಮತ್ತು ಜ್ಞಾನದಾಸೋಹ. ಸರ್ವ ಅನರ್ಥಗಳಿಗೆ

ಅಜ್ಞಾನವೇ ಮೂಲವೆಂದು ತಿಳಿದಿರುವ ಶ್ರೀಗಳವರು 'ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯ' ಎಂಬಂತೆ ಜ್ಞಾನಾಂಜನ ಶಲಾಕೆಯನ್ನು ತಿಳಿದಿರುವ ಶ್ರೀಗಳವರು ಜ್ಞಾನದ ಬಲದಿಂದ ಅಜ್ಞಾನಾಂಧಕಾರವನ್ನು ಕಳೆಯುತ್ತಾ ಬಂದಿದ್ದಾರೆ. ಅದಕ್ಕಾಗಿ ಶಿಶುವಿಹಾರದಿಂದ ಸ್ನಾತಕೋತ್ತರ ಪದವಿಯವರೆಗೆ ನೂರಾರು ಶಿಕ್ಷಣ ಸಂಸ್ಥೆಗಳನ್ನು ತೆರೆದು ಶಿಕ್ಷಣವನ್ನು ನೀಡುತ್ತಿದ್ದಾರೆ. ಸಂಸ್ಥೆಯ ಆಶ್ರಯದಲ್ಲಿ ಶಿಕ್ಷಣ ಪಡೆದ ಹಲವರು ದೇಶ ವಿದೇಶಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಸಿದ್ಧಗಂಗಾ ಶ್ರೀಗಳವರ ಶಿಕ್ಷಣ ಸಂಸ್ಥೆಗಳಲ್ಲಿದ್ದು ತಮ್ಮ ಬಾಳಿಗೆ ಬೆಳಕು ಪಡೆದಿರುವ ಜನರು ಎಲ್ಲೇ ಇದ್ದರೂ ಪೂಜ್ಯ ಸ್ವಾಮೀಜಿಯವರನ್ನು ಆಗಾಗ ಭಕ್ತಿ ಗೌರವಗಳಿಂದ ಸ್ಮರಿಸಿಕೊಳ್ಳುವುದನ್ನು ಗಮನಿಸಿದ್ದೇವೆ.

### ಮಾತೃ ಚೇತನ

ಜ್ಞಾನದಾಸೋಹದ ಜೊತೆಯಲ್ಲಿ ಅನ್ನದಾಸೋಹವನ್ನು ನೀಡುತ್ತಿರುವುದರಿಂದ ಅಸಂಖ್ಯಾತ ಗ್ರಾಮೀಣ ಬಡವರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗಿದೆ. ಸ್ವಾಮೀಜಿಯವರ ಸಹ ಆ ಮಕ್ಕಳನ್ನು ಮಾತನಾಡಿಸುವಾಗ ಮಮತೆಯ ಮಹಾಪೂರ ಹರಿಸುವುದನ್ನು ಖುದ್ದಾಗಿ ಕಾಣುವ ಅವಕಾಶ ನಮಗೆ ಲಭಿಸಿತ್ತು. ಒಮ್ಮೆ ಅನಿರೀಕ್ಷಿತವಾಗಿ ಸಿದ್ಧಗಂಗಾ ಶ್ರೀಮಠಕ್ಕೆ ಭೇಟಿಯಿತ್ತಾಗ ಪೂಜ್ಯರ ಸುತ್ತ ಸುಮಾರು ವಿದ್ಯಾರ್ಥಿಗಳಿದ್ದರು. ಅವರು ತಮ್ಮ ತಂದೆ-ತಾಯಿಯ ಹತ್ತಿರ ಸಲುಗೆಯಿಂದ ಮಾತನಾಡುವಂತೆ ಪೂಜ್ಯರೊಂದಿಗೆ ಮಾತನಾಡುತ್ತಿದ್ದರು. ವಿದ್ಯಾರ್ಥಿಗಳು ಒಬ್ಬೊಬ್ಬರೇ ಮುಂದೆ ಬಂದು ತಮ್ಮ ತೊಂದರೆಗಳನ್ನು ಹೇಳಿಕೊಂಡಾಗ ಸ್ವಾಮೀಜಿಯವರು ಹಸನ್ಮುಖಿಗಳಾಗಿ ಆ ವಿದ್ಯಾರ್ಥಿಗಳ ಸಮಸ್ಯೆಗಳನ್ನು ತಾಳ್ಮೆಯಿಂದ ಕೇಳುತ್ತಿದ್ದರು. ಸೂಕ್ತ ಪರಿಹಾರ ನೀಡುತ್ತಿದ್ದರು. ಚೆನ್ನಾಗಿ ಓದುವಂತೆ ಆಶೀರ್ವದಿಸುತ್ತಿದ್ದರು. ಅವರ ತಾಯ್ತನ ಕಂಡು ನಮಗೆ ಹೃದಯ ತುಂಬಿ ಬರುತ್ತಿತ್ತು. ತಮ್ಮ ಸ್ಥಾನಮಾನಗಳ ಹಮ್ಮುಬಿಮ್ಮುಗಳನ್ನು ತೋರದೆ ವಿದ್ಯಾರ್ಥಿಗಳೊಂದಿಗೆ ಸರಳವಾಗಿ ಬೆರೆಯುವ, ಆತ್ಮೀಯತೆಯಿರುವ ಅವರ ವಿಚಾರಗಳನ್ನು ಕೇಳಿ ಸಮಾಧಾನ ಮಾಡುವ, ಸರ್ವರನ್ನು ಸಮಾನವಾಗಿ ಕಾಣುವ ಶ್ರೀಗಳವರ ಜೀವನ ವಿಧಾನ ಅನುಕರಣೀಯವಾದುದಾಗಿದೆ.

### ಕಾಯಕಯೋಗಿ

ಪೂಜ್ಯರು ಬಸವಸಂದೇಶದ ಸಾಕಾರಮೂರ್ತಿಗಳಾಗಿದ್ದಾರೆ. ಕಾಯಕ, ದಾಸೋಹ, ಪೂಜೆಯಲ್ಲಿ ಸಾರ್ಥಕತೆಯನ್ನು ಕಂಡುಕೊಂಡಿದ್ದಾರೆ. ಅರ್ಹರಿಗೆ ಸೂಕ್ತ ಸಂದರ್ಭದಲ್ಲಿ ಸಮಾಜ ಸೇವಾದೀಕ್ಷೆ ಲಭ್ಯವಾದರೆ ಅವರು ಹೇಗೆ ಸಾಮಾಜಿಕ ಒಳಿತನ್ನು ಸಾಧಿಸಬಲ್ಲರೆಂಬುದಕ್ಕೆ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜೀವಂತ ನಿದರ್ಶನವಾಗಿದ್ದಾರೆ. ವಿವಿಧ ಕ್ಷೇತ್ರಗಳಲ್ಲಿರುವ ಮುಖಂಡರು ಜನರು ಬಯಸುವುದನ್ನು ಕೊಡದೆ ಆ ಜನರ ಪ್ರಗತಿಗೆ ಅಗತ್ಯವಾಗಿ ಏನು ಬೇಕು ಎಂದು ಚಿಂತಿಸಿ ಅಂಥದನ್ನು ಮಾತ್ರ ಕೊಡುವ ಮನಸ್ಸುಳ್ಳವರಾಗಿರಬೇಕು. ಶ್ರೀಗಳವರು ಈ ದಿಕ್ಕಿನಲ್ಲಿ ಯೋಚಿಸಿ ಜನರ ಉನ್ನತಿಗೆ ಬೇಕಾದುದನ್ನು ಮಾತ್ರ ಕೊಡುತ್ತ ಬಂದಿದ್ದಾರೆ. ಹಾಗಾಗಿಯೇ ಜನರು ತಮ್ಮ ತನು-ಮನ-ಧನವನ್ನು ಸಂಸ್ಥೆಯ ಬೆಳವಣಿಗೆಗೆ ಶ್ರದ್ಧೆಯಿಂದ ಸವೆಸುತ್ತಲಿದ್ದಾರೆ. ನಮ್ಮಲ್ಲಿರುವ ಎಲ್ಲಾ ಮಠಗಳಲ್ಲಿ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳಂಥವರು ಇದ್ದರೆ ಆ ಭಾಗದ ಜನರ ಉದ್ಧಾರ ತನ್ನಿಂದ ತಾನೇ ಆಗುತ್ತದೆ. ಅವಿರತವಾಗಿ ಸಮಾಜದ ವಿವಿಧ ಕಾರ್ಯಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವ ಸ್ವಾಮೀಜಿಯವರು ಶ್ರೀಗಂಧದಂತೆ ತೇದುಕೊಂಡು ಪರಿಮಳ ಬೀರುತ್ತ ಜನತೆಗೆ ತಂಪನ್ನೀಯುತ್ತಿದ್ದಾರೆ. ಕೂಡಲ ಸಂಗನನ್ನು ಒಲಿಸಲು ಬಂದಿರುವ ಪ್ರಸಾದ ಕಾಯವನ್ನು ಕಾಯಕದಲ್ಲಿ ಸವೆಸಿ ಕಾಯಕಯೋಗಿಗಳೆನಿಸಿದ್ದಾರೆ.

### ಹಿರಿಯ ಚೇತನ

ಇಂದು ನಾವೆಲ್ಲರೂ ಒಂದು ರೀತಿಯ ಪರ್ವಕಾಲದಲ್ಲಿದ್ದೇವೆ. ಎಲ್ಲಡೆ ಗೊಂದಲ, ಕೋಲಾಹಲ, ಸ್ವಜನ ಪಕ್ಷಪಾತ, ಸುಲಿಗೆ, ನಿರುದ್ಯೋಗ ಸಮಸ್ಯೆ, ಬಡತನ, ಅಜ್ಞಾನ, ಮೂಢ ನಂಬಿಕೆ ಮುಂತಾದವುಗಳನ್ನು ಕಾಣುತ್ತಿದ್ದೇವೆ. ಹೀಗಾಗಿ ಮೌಲ್ಯಗಳು, ಆದರ್ಶಗಳು ಮಣ್ಣುಪಾಲಾಗುತ್ತಿವೆ. ಮನುಷ್ಯ ಮಾನಸಿಕ ನೆಮ್ಮದಿಯನ್ನು ಕಳೆದುಕೊಂಡು ಒಂದು ರೀತಿಯ ಭಯದ ವಾತಾವರಣದಲ್ಲಿಯೇ ಬದುಕುವ ಸನ್ನಿವೇಶಗಳಿವೆ. ಅಪನಂಬಿಕೆ, ಅನುಮಾನ, ಅಹಂಕಾರ, ಸ್ವಾರ್ಥ, ಕೀರ್ತಿಪ್ರತಿಷ್ಠೆಯ ಶನಿಗಳು ಯಾರನ್ನೂ ಬಿಡುತ್ತಿಲ್ಲ. ಇಂಥ ವಿಷಮ ಪರಿಸ್ಥಿತಿಯಲ್ಲಿ ಶಾಂತಿಯ ಧಾಮಗಳಾಗಿ ಜನರ ಬದುಕಿಗೆ ಬೆಳಕು ತೋರಬೇಕಾಗಿದ್ದ ಮಠಗಳು, ಮಠಾಧೀಶರು ಕಣ್ಮರೆಯಾಗುತ್ತಿದ್ದಾರೆ. ಆದಾಗ್ಯೂ ಅಲ್ಲಲ್ಲಿ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳಂಥ ಹಿರಿಯ ಪುಣ್ಯಜೀವಿಗಳು ನಮ್ಮ ಕಣ್ಮುಂದಿರುವುದು ಆಶಾದಾಯಕವಾಗಿದೆ. ಅವರ ಕಾಯಕ ಶ್ರದ್ಧೆ, ಸಾಮಾಜಿಕ ಕಳಕಳಿ, ಜನಪರ ನಿಲುವು, ಮಾನವೀಯ ಅಂತಃಕರಣ ಸಮಾಜದ ವಿವಿಧ ನೇತಾರರಿಗೆ, ಮಠಾಧೀಶರಿಗೆ ಬಂದಲ್ಲಿ ಈ ಲೋಕದಲ್ಲಿ ನಿಜವಾದ ಶಾಂತಿ ನೆಮ್ಮದಿ ಲಭಿಸಬಲ್ಲದು. ೯೦ ವಸಂತಗಳನ್ನು ಸಾರ್ಥಕವಾಗಿ ಕಳೆದಿರುವ ಶ್ರೀಗಳವರ ದೇಹ ದಣಿದಿದೆ, ಹಣ್ಣಾಗಿದೆ. ಆದರೆ ಅವರ ಮನೋಬಲ ಕುಗ್ಗಿಲ್ಲ. ಉತ್ಸಾಹ ತಗ್ಗಿಲ್ಲ. ಕ್ರಿಯಾಶೀಲತೆ ಕಡಿಮೆ ಆಗಿಲ್ಲ. ಇಂಥ ದಿವ್ಯ ಹಿರಿಯ ಚೇತನ ಇನ್ನೂ ಹಲವಾರು ಕಾಲ ನಮ್ಮ ಮಧ್ಯದಲ್ಲಿದ್ದು ಸಮಾಜಕ್ಕೆ ದಿಕ್ಕು ತೋರಿಸುವಂತಾಗಲಿ ಎಂದು ಆಶಿಸುತ್ತೇವೆ.

(ಕೃಪೆ : ತೊಂಬತ್ತರ ತಪಸ್ವಿ)







# ಜೀವನಯೋಗಿ ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪ

- ಗೊ.ರು. ಚನ್ನಬಸಪ್ಪ
ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು

ಜೀವನ ಅನಿಶ್ಚಿತ, ದುಃಖಮಯ, ಕ್ಲಿಷ್ಟ - ಹೀಗೆಲ್ಲ ಕೆಲವರು ಹೇಳುವುದುಂಟು. ಈ ಮಾತಿನಲ್ಲಿ ಸತ್ಯವೂ ಇರಬಹುದು. ಆದರೆ ಈ ಅನಿಶ್ಚಿತತೆ, ದುಃಖ, ಕ್ಲಿಷ್ಟತೆಗಳನ್ನು ಗಮನಿಸದೆ ಬದುಕಿನಲ್ಲಿ ತುಂಬ ವಿಶ್ವಾಸವಿಟ್ಟು ಲೋಕಜೀವನ ಸತ್ಯ, ಸುಂದರ ಎಂದು ಕಾಣುವವರು, ಹಾಗೆಯೇ ಅದನ್ನು ಅನುಭವಿಸುವವರು ವಿರಳ. ಅಂತಹ ವಿರಳರಲ್ಲಿ ಸಿದ್ಧವನಹಳ್ಳಿ ನಿಜಲಿಂಗಪ್ಪನವರದು ಎದ್ದು ಕಾಣುವ ಹೆಸರು.

ನಿಜ, ಶ್ರೀ ನಿಜಲಿಂಗಪ್ಪನವರು ಪೂರ್ಣ ರಾಜಕಾರಣಿಗಳು. ಕರ್ನಾಟಕದ ಅಷ್ಟೇ ಅಲ್ಲ, ಇಡೀ ಭಾರತದ ರಾಜಕಾರಣದಲ್ಲಿ ಅವರು ವಹಿಸಿರುವ ಪಾತ್ರ ಸ್ಮರಣೀಯ. ಶಿಸ್ತು, ಸಭ್ಯತೆ, ನಿಷ್ಠೆ, ದುಡಿಮೆ - ಇಂತಹ ಶಬ್ದಗಳನ್ನು ಹತ್ತಿರಕ್ಕೂ ಸೇರಿಸದಿರುವ ಇಂದಿನ ರಾಜಕೀಯ ಪರಿಸರದಲ್ಲಿ ಶ್ರೀ ನಿಜಲಿಂಗಪ್ಪನವರಂತಹ ರಾಜಕಾರಣಿಗಳು ಆ ಮೌಲ್ಯಗಳಿಗಾಗಿ ಹೋರಾಡಿದವರು. ಎಂತಲೇ ಅವರ ಹೆಸರು ಸಂಭಾವಿತ ಭಾರತೀಯರೆಲ್ಲರ ನಾಲಿಗೆಯಲ್ಲಿ ನಲಿದಾಡುತ್ತಿದೆ.

ಶ್ರೀ ನಿಜಲಿಂಗಪ್ಪನವರು ಹುಟ್ಟಿ ಬೆಳೆದದ್ದು ಚಿತ್ರದುರ್ಗ ಜಿಲ್ಲೆಯ ಹಳ್ಳಿಯೊಂದರಲ್ಲಿ. ಜನ್ಮದಿನ ೧೯೦೨ರ ಡಿಸೆಂಬರ್ ಹತ್ತು. ಅವರು ಹುಟ್ಟಿದ್ದು ನಾವೆಲ್ಲ ಕೆಟ್ಟದ್ದೆಂದು ಹೇಳುವ ಮೂಲಾ ನಕ್ಷತ್ರದಲ್ಲಿ. ಶಾಸ್ತ್ರಿಗಳು ಬರೆದ ಜಾತಕವನ್ನು ಸುಳ್ಳುಮಾಡಿದ ಸಾಹಸದ ಜೀವನ ಅವರದು.

ಬಾಲ್ಯದಲ್ಲಿ ತಾಯಿಯ ಬಾಯಿಂದ ಪುರಾಣ - ಪುಣ್ಯ ಕತೆಗಳ ಆಲಿಕೆ. ಶರಣ ಸಿದ್ಧಾಂತದ ಸಂಸ್ಕಾರ. ಶಾಲೆಯಲ್ಲಿ ಶಿಸ್ತು ಮತ್ತು ಶ್ರದ್ಧೆಯ ವಿದ್ಯಾರ್ಥಿ. ಕಲಿಸುವವರ ಒಲವು ಪಡೆದ ಪ್ರತಿಭೆ. ಪ್ರೌಢಶಾಲಾ ಹಂತದಲ್ಲೇ ಗಾಂಧೀಜಿ ಅವರ ಸ್ವಾತಂತ್ರ್ಯ ಹೋರಾಟದ ಚಳುವಳಿಯ ಕರೆಗೆ ಓಗೊಟ್ಟ ರಾಷ್ಟ್ರಪ್ರೇಮ, ಅರ್ಥಹೀನ ಸಂಪ್ರದಾಯಕ್ಕೆ ಬದಲಾಗಿ ಅರ್ಥಪೂರ್ಣ ವಿಚಾರವಾದದ ಕಡೆಗೆ ತಿರುಗಿದ ಪ್ರಗತಿಪರ ದೃಷ್ಟಿ.

ಕರ್ನಾಟಕದ ಏಕೀಕರಣದಲ್ಲಂತೂ ಶ್ರೀ ನಿಜಲಿಂಗಪ್ಪ

## ಅಭಿನಂದನೆ

## ಶ್ರೀ ಎಸ್. ನಿಜಲಿಂಗಪ್ಪ ಅವರಿಗೆ 'ಕರ್ನಾಟಕ ರತ್ನ' ಪ್ರಶಸ್ತಿ



ಕರ್ನಾಟಕದ ಮಾಜಿ ಮುಖ್ಯಮಂತ್ರಿ, ಶುದ್ಧ ಮನಸ್ಸಿನ, ನೇರ ನುಡಿಯ, ಸರಳತೆ ಸಜ್ಜನಿಕೆ ಪ್ರಾಮಾಣಿಕತೆಗಳ ಮಹಾಸಂಗಮ, ರಾಷ್ಟ್ರದ ಹಿರಿಯ ರಾಜಕೀಯ ಮುತ್ಸದ್ದಿ **ಶ್ರೀ ಎಸ್. ನಿಜಲಿಂಗಪ್ಪ** ಅವರು ಕರ್ನಾಟಕಕ್ಕೆ ಸಲ್ಲಿಸಿದ ಸೇವೆ ಅನುಪಮ, ಅವಿಸ್ಮರಣೀಯ. ಅವರು ನಾಡು-ನುಡಿಗಳಿಗೆ ಸಲ್ಲಿಸಿದ ವಿಶಿಷ್ಟ ಸೇವೆಗಾಗಿ ಕರ್ನಾಟಕ ಸರ್ಕಾರ ರಾಜ್ಯದ ಅತ್ಯುನ್ನತ ಪ್ರಶಸ್ತಿಯಾದ **'ಕರ್ನಾಟಕ ರತ್ನ'** ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಗಾಂಧಿ ಜಯಂತಿಯಂದು ಚಿತ್ರದುರ್ಗದಲ್ಲಿ ನಡೆದ ಸಮಾರಂಭದಲ್ಲಿ ಪ್ರಶಸ್ತಿ ಪ್ರದಾನ ಮಾಡಿ ಸರ್ಕಾರ ತನ್ನ ಗೌರವವನ್ನು ಹೆಚ್ಚಿಸಿಕೊಂಡಿದೆ. ಈ ಶುಭ ಸಂದರ್ಭದಲ್ಲಿ ಶ್ರೀ ಎಸ್. ನಿಜಲಿಂಗಪ್ಪನವರಿಗೆ **'ಸಿದ್ಧಗಂಗಾ' ಅಭಿನಂದನೆಗಳನ್ನು ಸಲ್ಲಿಸುತ್ತದೆ.**

ನವರ ಹೋರಾಟ ಮರೆಯಲಾರದಂತಹುದು. ಕನ್ನಡದ ನೆಲ-ಜಲಗಳ ಬಗೆಗೆ, ನುಡಿ-ಗಡಿಗಳ ಬಗೆಗೆ ಅವರಿಗಿರುವ ಅಭಿಮಾನ ಉಜ್ವಲವಾದುದು. ಆದರೆ ರಾಜ್ಯದ ಅಭಿಮಾನದಲ್ಲಿ ರಾಷ್ಟ್ರದ ಸಮಗ್ರತೆಯನ್ನು ಉಪೇಕ್ಷಿಸಿದವರಲ್ಲ.

ನಮ್ಮ ಮೈಸೂರು ರಾಜ್ಯದ ಪ್ರಥಮ ಮುಖ್ಯಮಂತ್ರಿಗಳಾಗಿ ಶ್ರೀ ನಿಜಲಿಂಗಪ್ಪನವರು ರಾಜ್ಯಕ್ಕೊಂದು ಘನತೆ, ಗೌರವ ತಂದುಕೊಟ್ಟರು. ರಾಜ್ಯದ ನಿಸರ್ಗ ಸಂಪನ್ಮೂಲಗಳ ಸಮರ್ಥ ಬಳಕೆಯ ಬಗೆಗೆ ಆದ್ಯತೆ ಕೊಟ್ಟರು. ಇಂದು ಕಾರ್ಯಗತವಾಗಿರುವ ಮತ್ತು ಇನ್ನೂ ಕಾರ್ಯಗತವಾಗಬೇಕಾಗಿರುವ ಬಹುತೇಕ ನೀರಾವರಿ, ಜಲ ವಿದ್ಯುತ್ ಮತ್ತಿತರ ಅಭಿವೃದ್ಧಿ ಯೋಜನೆಗಳು ರೂಪುಗೊಂಡದ್ದು ಅವರ ಕಾಲದಲ್ಲಿ. ಸಮುದಾಯ ಅಭಿವೃದ್ಧಿ ಕಾರ್ಯಗಳಲ್ಲಿ 'ಆದ್ಯತೆ'ಯನ್ನು ಗುರುತಿಸಿದ ದೂರದರ್ಶಿ ಆಡಳಿತಗಾರರು ಶ್ರೀ ನಿಜಲಿಂಗಪ್ಪನವರು.

ಯಾರ ದಾಕ್ಷಿಣ್ಯ, ಯಾರ ಹಂಗೂ ಇಲ್ಲದ ಶ್ರೀ ನಿಜಲಿಂಗಪ್ಪನವರು ಜೀವನದುದ್ದಕ್ಕೂ ನಿಷ್ಠುರಕ್ಕೆ ಗುರಿಯಾ ದವರು. ಆದರ ಅದೆಲ್ಲಕ್ಕಿಂತ ಮಿಗಿಲಾಗಿ ಜನಪ್ರೇಮ ಗಳಿಸಿ ದವರು. ಅದಕ್ಕೆ ಕಾರಣ ಅವರ ನಿಷ್ಕಲ್ಮಷ, ನಿರಾಡಂಬರದ ಬದುಕು; ವಿಶ್ವವಿಶಾಲ ದೃಷ್ಟಿ.

ಅವರು ದೇಶದ ಆಗು-ಹೋಗುಗಳ ಬಗ್ಗೆ ಎಂದೂ ನಿರ್ಲಿಪ್ತರಾಗಿ ಕುಳಿತವರಲ್ಲ. ಒಳಿತಾಗಲಿ, ಕೆಡುಕಾಗಲಿ ಕೂಡಲೇ ಸ್ಪಂದಿಸುತ್ತಾರೆ. ಇಂದು ದೇಶದ ನರನಾಡಿಗಳನ್ನೇ ಕಿತ್ತು ತಿನ್ನುತ್ತಿರುವ ಭ್ರಷ್ಟಾಚಾರ, ರಾಜಕೀಯ ದ್ರೋಹ ಮತ್ತು ಸೋಮಾರಿತನಗಳ ವಿರುದ್ಧ ಅವರು ನಿರ್ಭಯದಿಂದ ಮಾತನಾಡುತ್ತಾರೆ. ಅವರ ನಿಷ್ಠುರದ ಮಾತುಗಳನ್ನು ಅರ್ಥ ಮಾಡಿಕೊಳ್ಳಲಾಗದ ಕೆಲವರು ಅವರನ್ನು ತಪ್ಪಾಗಿ ತಿಳಿದುದೇ ಹೆಚ್ಚು. ಆದರೆ ಅವರಿಗೆ ಅದಾವುದರ ಪರಿವೆಯೂ ಇಲ್ಲ. ಕಂಡದ್ದನ್ನು ಕಂಡಂತೆ ಆಡುವ ಖಂಡಿತವಾದ ಅವರಿಗೆ ಮೈಗೂಡಿದ ಸ್ವಭಾವ.

ಶ್ರೀ ನಿಜಲಿಂಗಪ್ಪನವರು ಇಷ್ಟೆಲ್ಲ ರಾಜಕೀಯ ಒತ್ತಡ ಮತ್ತು ಏರುಪೇರುಗಳನ್ನು ಕಂಡವರಾದರೂ ಜೀವನದ ಸಮತೂಕ ಕಳೆದುಕೊಂಡವರಲ್ಲ. ಸದಾ ಹಸನ್ಮುಖಿ. ಅವರನ್ನು ಕಂಡು ಮಾತನಾಡಿದರೆ ಸೋಲೂ ಗೆಲುವಾಗುತ್ತದೆ. ಅಂತಹ ಜೀವನೋತ್ಸಾಹ ಅವರದು. ದಿಲ್ಲಿಯ ದೊಡ್ಡವರಿರಲಿ, ಹಳ್ಳಿಯ ಸಣ್ಣವರಿರಲಿ ಇಬ್ಬರ ಬಗೆಗೂ ಒಂದೇ ದೃಷ್ಟಿ. ಗ್ರಾಮೀಣ ಅಭಿವೃದ್ಧಿಯ ಬಗೆಗಂತೂ ಅವರ ಕನಸುಗಳು ನೂರಾರು.

ಶ್ರೀ ನಿಜಲಿಂಗಪ್ಪನವರ ಜೀವನ ವಿಶ್ವಾಸ ಅಸದೃಶವಾದುದು. ಅವರು ಸಭೆಯಲ್ಲಿ ಮಾತಾಡುವಾಗ ಒಂದು ಮಾತನ್ನು ಹೇಳುತ್ತಲೇ ಇರುತ್ತಾರೆ, "ಇಷ್ಟೆಲ್ಲ ಗೊಂದಲಗಳಿದ್ದರೂ ಈ ಬದುಕನ್ನು ನಾನು ತುಂಬ ಪ್ರೀತಿಸುತ್ತೇನೆ. ನಾನು ಈ ಲೋಕದಲ್ಲಿ ಹೆಚ್ಚು ಕಾಲ ಇರಬೇಕೆಂದೂ ಬಯಸುತ್ತೇನೆ. ಈ ನಿಸರ್ಗ, ಈ ಜನ, ಈ ಲೋಕ ವ್ಯವಹಾರ ಸಾಮಾನ್ಯವಲ್ಲ. ಇದನ್ನೆಲ್ಲ ನೋಡಿ ನಾವು ಆನಂದಪಡಬೇಕು".

ಶ್ರೀ ನಿಜಲಿಂಗಪ್ಪನವರು ನಮ್ಮ ಕಾಲದ ನಿಜವಾದ ಜೀವನಯೋಗಿ!

## ಧ್ಯೇಯ ತಪಸ್ವಿ

ಅದು ಎಂದೂ ಮರೆಯದ, ಮರೆಯಲಾಗದ, ಮರೆಯಬಾರದ ಹಾಗೂ ಅತ್ಯಂತ ಸಂತೋಷಕರವಾದ, ಸಂಪೂರ್ಣ ತೃಪ್ತಿ ತರುವ, ಆನಂದದಾಯಕ ದೃಶ್ಯ. ಸುಮಾರು ಐದು ಸಾವಿರ ವಿದ್ಯಾರ್ಥಿಗಳು ಒಟ್ಟಿಗೆ ಸೇರಿ, ಸಮವಸ್ತ್ರ ಧರಿಸಿ, ಒಂದು ಸಭಾಂಗಣದಲ್ಲಿ ಪ್ರಾರ್ಥನೆ ಸಲ್ಲಿಸಿದರು. ಅವರ ಎದುರಿನಲ್ಲಿ ಶ್ರೀ ಸ್ವಾಮಿಗಳವರು ಮಕ್ಕಳಿಗೆ ಬೋಧನೆ ಮಾಡಿದರು. ಇದು ಮೇಲೆ ಹೇಳಿದ ಅನುಭವ. ವೈಶಿಷ್ಟ್ಯವೇನೆಂದರೆ ಆ ಮಕ್ಕಳೆಲ್ಲರೂ ಅತ್ಯಂತ ಬಡಕುಟುಂಬದವರು. ಮತ್ತೊಂದು ವೈಶಿಷ್ಟ್ಯವೆಂದರೆ ಅವರಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಅನಾಥರು, ಬಹುಶಃ ತಂದೆ ತಾಯಿಗಳು ಯಾರೆಂದು ಅರಿಯದವರೂ ಇದ್ದರೆಂದು ನನ್ನ ಆಲೋಚನೆ. ಇದಕ್ಕಿಂತ ಹೆಚ್ಚಿನ ವೈಶಿಷ್ಟ್ಯವೆಂದರೆ ಹಾಗೂ ಎಲ್ಲರೂ ಅನುಸರಿಸಬೇಕಾದ ವೈಶಿಷ್ಟ್ಯವೆಂದರೆ ಆ ಮಕ್ಕಳು ಎಲ್ಲ ಜಾತಿಯವರು, ಎಲ್ಲ ಕೋಮಿನವರು, ವೀರಶೈವರು, ಬ್ರಾಹ್ಮಣರು, ನಾಯಕರು, ಕುರುಬರು ಮೇಲಾಗಿ ಹರಿಜನರು, ಜೊತೆಗೆ ಅಲ್ಪಸಂಖ್ಯಾತರು ಅಂದರೆ ಮುಸಲ್ಮಾನರು, ಕ್ರಿಶ್ಚಿಯನ್ನರು - ಇವರ ಮಕ್ಕಳೂ ಇದ್ದುದು. ಇಂತಹ ಸಂಸ್ಥೆ ಹಾಗೂ ಇಷ್ಟು ದೊಡ್ಡ ಸಂಖ್ಯೆಯಲ್ಲಿ ನಡೆಸತಕ್ಕ ವಿದ್ಯಾರ್ಥಿನಿಲಯ ಹಿಂದುಸ್ತಾನದ ಬೇರೆಲ್ಲೂ ಇರುವ ಸಂಭವ ಇಲ್ಲ. ನಾನು ಹಿಂದೂಸ್ತಾನವನ್ನಲ್ಲದೆ, ಅರ್ಧ ಪ್ರಪಂಚವನ್ನು ಸುತ್ತಿದ್ದೇನೆ. ಅಲ್ಲಿ ಎಲ್ಲೂ ಇಂತಹ ಸಂಸ್ಥೆ ಕಂಡು ಬರಲಿಲ್ಲ. ಆದ್ದರಿಂದಲೇ ಆ ದಿನ ಕಂಡ ದೃಶ್ಯ ನನಗೆ ಎಂದೂ ಮರೆಯಲಾಗದುದು.

ಆ ಮಕ್ಕಳಿಗೆ ಬೋಧಿಸಿದ ಗುರುಗಳು ಮತ್ತಾರೂ ಅಲ್ಲ. ಶ್ರೀ ಸಿದ್ಧಗಂಗಾ ಮಠದ ಪೂಜ್ಯ ಗುರುಗಳಾದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು.

- ಎಸ್. ನಿಜಲಿಂಗಪ್ಪ





ಭಾಗ-೮

# ಬಸವಣ್ಣನವರ ವಚನಗಳಲ್ಲಿ ಯುಗಪ್ರಜ್ಞೆ ಮತ್ತು ಮೌಲ್ಯಗಳು

-ಸುಜನಾ

(ಕಳೆದ ಸಂಚಿಕೆಯಿಂದ)

ಕಳೆಯಲಾಗದ ಇದನ್ನು ಮಹತ್ ಕೈಂಕರ್ಯಕೊಡ್ಡುವ ಮೂಲಕ ತಿದ್ದಬಹುದೆಂದೆ. ಕೀಳಾಗಬೇಕು, ಯಾರಿಗೆ? ಹಯನಕ್ಕೆ ಮಾತ್ರ. ಹಾಲು ಕೆಚ್ಚಲು ತುಂಬಿದ ಹಸುವಿನ ಮುಂದೆ ಕೀಳಾಗಿ ಕುಳಿತರಷ್ಟೇ ಹಾಲು ಕರೆಯಬಹುದು. "ಮೇಲಾಗಲೊಲ್ಲೆನು ಕೀಳಾಗಲಲ್ಲದೆ : ಕೀಳಿಂಗಲ್ಲದೆ ಹಯನಕರೆವುದೆ?" ಭೌತಸುಖಭೋಗಕ್ಕಾಗಿ ಎಷ್ಟೆಲ್ಲ ದೈನ್ಯಪಡುವುದಿಲ್ಲ. ಕತ್ತೆಕಾಲು ಕಟ್ಟಬಹುದು, ಹಸುಮುಂದೆ ಮಂಡಿಯೂರ ಬರುವುದಿಲ್ಲ. ಶ್ರೀ ರಾಮಾನುಜರು ಮುಗಿದ ಕೈ ಮುಗಿದಿರಲಿ ಎಂಬ ದೃಷ್ಟಿತಾಳಿದರು. ಬಸವಣ್ಣನವರು ಆ ವಿನಯಭಕ್ತಿಗೆ ಒಂದು ವಿಶದೀಕರಣ ನೀಡುತ್ತಾರೆ. ಕೈಮುಗಿವ-ತಲೆಬಾಗುವ ಕ್ರಿಯೆ ಪ್ರೀತಿಗೌರವದ ಕ್ರಿಯೆಯಾದರೆ - ಅಹಂನಿರಸನದ ವಿಧಿಯಾದರೆ ಸಾಧನೆಯಾಗುತ್ತದೆ. ಲೌಕಿಕರಾದ ನಮ್ಮ ಬಾಗು-ಮುಗಿತಗಳು ಏತದ ತಲೆಬಾಗು, ಇಕ್ಕುಳದ ಕೈಮುಗಿತವಾಗಿವೆ. ತಾನೆ. ಕೈಯಲ್ಲಿ ಹಿಡಿದು ಕೊಳ್ಳಬರುವುದಾದರೆ ಯಾರು ತಾನೆ ಇಕ್ಕುಳ ಬಳಸುತ್ತಾರೆ. ಕಾದದ್ದನ್ನು ಬಿಗಿಯಾದದ್ದನ್ನು ಇಕ್ಕುಳದಿಂದ ಮಾತಾಡಿಸುತ್ತಾರೆ. ನೀರುಕೊಂಡು ಹೋಗುವಾಗಷ್ಟೆ ಏತ ತಲೆಬಾಗಿ ಬಾವಿಯ ತಳಕ್ಕಿರಗುತ್ತದೆ. ತುಂಬಿಕೊಂಡೊಡನೆಯೆ ತುಂಬು ಬಾನಿಯನ್ನು ಮೇಲೆತ್ತಿ ಒಯ್ಯುತ್ತ ಚಲ್ಲುತ್ತ ಹೋಗುತ್ತದೆ. ಖಾಲಿಯಾದ ಮೇಲೆ ಮತ್ತೆ ಕಾಲಿಗೆರಗುತ್ತದೆ. ಈ ಬಗೆಯ ದೈನ್ಯ ಅವಮಾನಕರ.

**ಏತ ತಲೆವಾಗಿದರೇನು? ಗುರುಭಕ್ತನಾಗಬಲ್ಲುದೆ?**
**ಇಕ್ಕುಳ ಕೈಮುಗಿದರೇನು? ಭೃತ್ಯಾಚಾರಿಯಾಗಬಲ್ಲುದೆ?**

ನಿಜವಾದ ವಿನಯ-ಗೌರವಗಳು ಬೇರೆಯ ರೀತಿಯವು. ಸಾಮಾಜಿಕ ವಿನಯವನ್ನು ಗಮನಿಸುವಂಥವು. ತನ್ನೆಡೆ ಬರುವವರನ್ನ ಎಷ್ಟು ಜನ ಅಧಿಕಾರಿಗಳು ಪ್ರೀತಿಯಿಂದ ಆದರದಿಂದ ಮಾತನಾಡಿಸಿಯಾರು? ಏಕೆ ಹಾಗೆ ಮಾಡುತ್ತಾರೆ? ತಮಗಿಂತ ಮೇಲಿನವರಿಗೆ ಬಾಗಿದ ತಲೆಯನ್ನು ಮೇಲೆತ್ತುವ ವಿಧಾನವೆ ಅದು?

**ಏನಿ ಬಂದಿರಿ ಹದುಳವಿದ್ದಿರೆ? ಎಂದರೆ**
**ನಿಮ್ಮ ಮೈಸಿರಿ ಹಾರಿಹೋಹುದೆ?**
**ಕುಳ್ಳಿರೆಂದರೆ ನೆಲ ಕುಳಿಹೋಹುದೆ?**
**ಒಡನೆ ನುಡಿದರೆ ಶಿರಹೊಟ್ಟೆಯೊಡೆವುದೆ?**
**ಕೊಡಲಿಲ್ಲದಿದ್ದರೊಂದು ಗುಣವಿಲ್ಲದೊಡೆ**
**ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ.**

ಬಸವಣ್ಣನವರು ಹೇಳಿದ ಎಂಟುನೂರು ವರ್ಷಗಳಾದ ಮೇಲೂ ಈ ವಚನವನ್ನು ಹೇಳಬೇಕಾದ ಅಗತ್ಯ ತಪ್ಪಿಲ್ಲ. ಮತ್ತೂ ಹೆಚ್ಚುತ್ತಿದೆಯೇನೊ. ಬದುಕಿಗೆ ಬಂದ ಮೇಲೆ ಅದಕ್ಕೆ ಕೊಡಬೇಕಾದ ಸುಂಕ-ಬೆಲೆ ತೆರಲೇಬೇಕು. ಕರ್ತವ್ಯ ಮಾಡಲೇಬೇಕು. ಈ ಕರ್ತವ್ಯದಲ್ಲಿ ಮೋಸ ಸಲ್ಲದು. "ಭಾಂಡವ ತುಂಬಿದ ಬಳಿಕ ಸುಂಕವತೆತ್ತಲ್ಲದೆ ವಿರಹಿತ ಹೋಗಬಾರದು. ಕಳ್ಳನಾಣ್ಯ ಸಲುಗೆಗೆ ಸಲ್ಲದು, ಕಳ್ಳನಾಣ್ಯವ ಸಲ್ಲಲೀಯರಯ್ಯ." "ಸುಂಕದಕಟ್ಟೆಯಲ್ಲಷ್ಟೆ ಸುಂಕಿಗ ಇದ್ದಾನೆಂದಲ್ಲಿ, ಎಲ್ಲೆಲ್ಲೂ ಇದ್ದಾನು. ಕಳ್ಳ ನಾಣ್ಯದ ಅರಿವು ಅವನಿಗೆ ಚೆನ್ನಾಗಿ ಗೊತ್ತುಂಟು. ಈ ಸಂಸಾರದ ಬೇಹಾರದಲ್ಲಿ ಗೆಲ್ಲುವುದು ಸೋಲುವುದು ಎಂದಿಲ್ಲ. ಈ ಭೂಮಂಡಲದ ಮೇಲೊಂದು ಹಿರಿದಾದ ಅಂಗಡಿ ಹಾಕಿರುವ ಮಹಾದೇವಶೆಟ್ಟಿ ಕುಷಿಗಾರ, ಒಮ್ಮನವಾದರ ನುಡಿಯುತ್ತಾನೆ; ಇಮ್ಮನವಾದರೆ ನುಡಿಯ. ಕಾಣಿಯ ಗೆಲ್ಲ ಅರ್ಧಗಾಣಿಯ ಸೋಲ. ಕೊಳ್ಳುವ ಮಾನ ಕೊಡುವ ಮಾನಗಳನ್ನು ಬೇರೆ ಬೇರೆ ಇಟ್ಟಿರುವುದು ಸಾಧ್ಯವಿಲ್ಲ. ನನ್ನದಾದರೆ ಒಂದಳತೆ ; ನಿನ್ನದಕ್ಕೆ ಮತ್ತೊಂದು ಎಂಬಂತಿಲ್ಲ. ಮೇಲಾಗಿ ಅವನು ನಮ್ಮ ಮನ ನೋಡುತ್ತಾನೆ. ತನ್ನ ಮನದೊಡನೆ ಕೂಡಿ ಒಮ್ಮನವಾದರೆ ನುಡಿಯುತ್ತಾನೆ; ಇಲ್ಲವೆ ಇಲ್ಲ. ಕಾರಣ ಅವನ ಧ್ಯೇಯ No Profift, No Loss. ಹಾಗಿರುವಾಗ ಕೃತಕ ವಿನಯವೇಕೆ? "ಕಾಣಿಯ ಗೆಲ್ಲ ಅರ್ಧಗಾಣಿಯ ಸೋಲ". "ಒಮ್ಮನವಾದರೆ ನುಡಿವ ಇಮ್ಮನವಾದರೆ ನುಡಿಯ" ಎಂಬ ಧೋರಣೆ ಎಷ್ಟು ಆರೋಗ್ಯಕಾರಿ! ಭಗವದ್ ವ್ಯಾಪಾರದಲ್ಲಿ ಯಾರನ್ನು ಸೋಲಿಸಿ ಮೆರೆಯಬೇಕೆಂದಿಲ್ಲ. ಗೆಲುವೂ ಸೋಲೂ ಇರದ ಸಮಭಾವಸಿದ್ಧಿ ಲಭಿಸಬೇಕೆಂಬುದು ಮುಖ್ಯ.

ಹರಸಿಕೊಂಡು ಮಾಡುವುದೆಲ್ಲ ವ್ಯಾಪಾರ. ಹಾಗೆಯೆ ನೆರಹಿಕೊಂಡು ಮಾಡುವುದು ಡಾಂಭಿಕತನ. ದೇವರನ್ನು ಶೆಟ್ಟಿಮಾಡಿರೆ ಅವನೇನು ಮಾಡಿಯಾನು. ಭಕ್ತಿಯೆಂಬುದು

ಕೈಕೂಲಿಯಲ್ಲವಲ್ಲ ಹಾಗೂ ಪ್ರದರ್ಶನವೂ ಅಲ್ಲ. "ಸಾ ಪರಮಪ್ರೇಮರೂಪಾ" ಎಂಬ ನಾರದಭಕ್ತಿ ಸೂತ್ರದ ಉಕ್ತಿಯನ್ನು ನೆನೆದುಕೊಳ್ಳಬಹುದು. "ಹರಸಿ ಮಾಡುವುದು ಹರಕೆಯ ದಂಡ. ನೆರಹಿ ಮಾಡುವುದು ದಂಬಿನಭಕ್ತಿ. ಹರಬೇಡ, ನೆರಹಬೇಡ. ಬಂದ ಬರವನರಿದರೆ ಕೂಡಿ ಕೊಂಡಿಪ್ಪ..." ಈ ಹರಕೆಯ ಭಕ್ತಿಯಂತೆ ನೇಮಾಚರಣದ ಭಕ್ತಿಯಿದೆ. ಈ ನೇಮಗಳಾದರೂ ಎಂತಹುದು? ಈ ಹಿಂದೆಯೆ ವಿವರಿಸಿರುವಂತೆ ಎಲ್ಲ ರುಚಿಕರ, ದುಬಾರಿಯಾದುವು. ಅಷ್ಟರಿಂದಲೆ ಮೇಲ್ವರ್ಗವಾಗುವ ಹಮ್ಮು "ಹಾಲನೇಮ, ಹಾಲಕೆನೆ ನೇಮ; ಕೆನೆತಪ್ಪಿದ ಬಳಿಕ ಕಿಚ್ಚಡಿಯ ನೇಮ; ಬೆಣ್ಣೆಯ ನೇಮ! ಬೆಲ್ಲದ ನೇಮ! ಅಂಬಲಿಯ ನೇಮದವರಾರನೂ ಕಾಣೆ. ಕೂಡಲಸಂಗನ ಶರಣರಲ್ಲಿ ಅಂಬಲಿಯನೇಮದವ ಮಾದಾರಚೆನ್ನಯ್ಯ!" ಈ ವಚನದ ಮೂಲಕ ಅಂತ್ಯಜಗಮನವನ್ನು ಮಾರ್ಮಿಕರೀತಿಯಿಂದ ಹರಿಸಿದ ಅಣ್ಣನವರು ನೇಮಕ್ಕೆ ಅದ್ಭುತವಾದ ರೀತಿಯಲ್ಲಿ ಹೊಸ ವ್ಯಾಖ್ಯಾನವನ್ನು ನೀಡುತ್ತಾರೆ : ಬಂದುದ ಕೈಕೊಳ್ಳಬಲ್ಲರೆ ನೇಮ, ಇದ್ದುದ ವಂಚನೆಯ ಮಾಡದಿದ್ದರೆ ಅದು ನೇಮ; ನಡೆದು ತಪ್ಪದಿದ್ದರೆ ನೇಮ, ನುಡಿದು ತಪ್ಪದಿದ್ದರೆ ನೇಮ. ನಮ್ಮಕೂಡಲ ಸಂಗನ ಶರಣರು ಬಂದರೆ ಒಡೆಯರಿಗೊಡವೆಯನೊಪ್ಪಿಸುವುದೇ ನೇಮ!".

ಬಂದುದನ್ನು ಕೊಳ್ಳುವುದಿದೆಯಲ್ಲ ಅಸಾಧಾರಣ ಶಕ್ತಿಯನ್ನಪೇಕ್ಷಿಸುವ ಮೌಲ್ಯ. ಅಷ್ಟೆ ಶಕ್ತಿ ಉಳಿದುವಕ್ಕೂ ಬೇಕು. ಈ ಶಕ್ತಿವಂತರರನ್ನು ಸಿದ್ಧಮಾಡುವುದೆ ಅಣ್ಣನವರ ಧ್ಯೇಯ. ಶಿವನಿರ್ಭಯವಿದ್ದುದರಿಂದಲೆ : "ನಾಳೆ ಬಪ್ಪುದು ನಮಗಿಂದೆ ಬರಲಿ; ಇಂದು ಬಪ್ಪುದು ನಮಗೀಗಲೆ ಬರಲಿ; ಇದಕಾರಂಜುವರು ಇದಕಾರಳುಕುವರು ಜಾತಸ್ಯಮರಣಂ ಧ್ರುವಂ!" ಈ ಶಿವಧೈರ್ಯ ಭಯಂಕರವಾದದ್ದೆ ಸರಿ. ಈ ಧೈರ್ಯ ಕೂಲಿಗಾಗಿ ಮಾಡುವಾಗ, ಸುಖಾಂಕ್ಷಿಯಾಗಿ ಮಾಡುವಾಗ ಬರುವುದಿಲ್ಲ. "ಜೋಳವಾಳಿಯಾನಲ್ಲ ವೇಳೆವಾಳಿಯಾನಲ್ಲ; ಹಾಳುಗೆಟ್ಟೋಡುವ ಆಳು ನಾನಲ್ಲವಯ್ಯ! ತನದ ಕನಸು ಕಾಣುವವರೆ ಹೆಚ್ಚು. ಅದರಿಲ್ಲಿ ಅಣ್ಣ ತನ್ನನ್ನೆ ಕುರಿತು ಹೇಳಿಕೊಳ್ಳುವ ಮಾತಿದು. ಕಾಯುವುದು ಯಾವುದಕ್ಕೆ? ಅಲ್ಪಭೋಗಕ್ಕಾಗಿ. ಅದು ನಾಳೆ ಬರುವುದು ಈವಾಗಲೆ ಬರಲೆಂಬ ದೈನ್ಯ. ಆದರೆ ಸಾವಿಗೆ ಹಾಗೆ ಸಿದ್ಧವಾಗಿರಲು ಬೇಕಾದುದು ದೈನ್ಯವಲ್ಲ, ಬರಿಯ ಧೈರ್ಯವೂ ಅಲ್ಲ; ಶಿವಧೈರ್ಯ. ಸಾವಾದರೂ ಆಯುಷ್ಯತೀರದೆ ಬಾರದು! "ಆಯುಷ್ಯ ತೀರಿದಲ್ಲದೆ ಮರಣವಿಲ್ಲ! ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ! ಅಂಜಲದೇಕೋ ಲೋಕ ವಿಗರ್ಭಣೆಗೆ ಅಂಜಲದೇಕೋ ಕೂಡಲಸಂಗಮದೇವಾ, ನಿಮ್ಮಾಳಾಗಿ!" ನಿರ್ಭೀತಿಯಿಲ್ಲದ ಯಾವ ಶಿವಸಾಧನೆಯೂ ಆಗದು. ಸ್ವಾಮಿ ವಿವೇಕಾನಂದರು ಹೇಡಿಗಳನ್ನು ಮಾಡುವುದಾದರೆ ದೇವರನ್ನೂ ತಿರಸ್ಕರಿಸೆಂದು ಗುಡುಗಿದರು. ಪರಮ ಆತ್ಮವನ್ನು ಅಭೀತಿಯೆಂದೆ ಕರೆದರು. ಈ ದೃಷ್ಟಿಯ ಬಸವಣ್ಣನವರು ಭಯಂಕಾರಕವಾದ ಎಲ್ಲ ಕ್ಷುದ್ರ ದೈವಗಳನ್ನೂ ಕಿತ್ತೆಸೆಯುತ್ತಾರೆ.

> **ಅರಗು ತಿಂದು ಕರಗುವ ದೈವವ, ಉರಿಯ ಕಂಡರೆ**
> **ಮುರುಟುವ ದೈವವನೆಂತು ಸರಿಯೆಂಬೆನಯ್ಯ,**
> **ಅವಸರ ಬಂದರೆ ಮಾರುವ ದೈವವನೆಂತು ಸರಿಯೆಂಬೆನಯ್ಯ**
> **ಅಂಜಿಕೆಯಾದರೆ ಹೂಳುವ ದೈವವನೆಂತು ಸರಿಯೆಂಬೆನಯ್ಯ**
> **ಸಹಜಭಾವ ನಿಜೈಕ್ಯ ಕೂಡಲ ಸಂಗಮದೇವನೊಬ್ಬನೇ ದೇವ!**

ಈ ವಚನದಲ್ಲಿ ತುಂಬಾ ಸ್ಪಷ್ಟವಾಗಿದೆ ಅಣ್ಣನವರ ದೃಷ್ಟಿ. ಜಾನಪದದ ಬಗೆಗೆ ಅಸಾಮಾನ್ಯ ಪ್ರೀತಿಯನ್ನು ತೋರಿದ ಅವರು ಏಕಾದರೂ ಅವರ ದೈವಕ್ಕೆ ಮುನಿದೆದ್ದರು ಎಂಬುದಕ್ಕೆ ಮೂಲಕಾರಣವಿಲ್ಲಿದೆ. ಭಯಕಾರಕ ದೈವಗಳು ಭಕ್ತನನ್ನಲ್ಲ ಸೃಷ್ಟಿಸುವುದು, ಜೋಳವಾಳಿ ವೇಳೆವಾಳಿಗಳನ್ನು, ಗುಲಾಮರನ್ನು. ರೋಗಗಳೂ ರೋಗಿಯನ್ನು ಹಾಗೆಯೆ ಮಾಡುತ್ತದೆ. ಮಾನವವಿಕಾಸದಲ್ಲಿ ಭಯಕಾರಕ ದೈವಗಳದು ಒಂದು ಘಟ್ಟ. ಅದರಂತೆ ಗುಲಾಮ ಒಡೆಯ ಪದ್ಧತಿಯೂ ಒಂದ ಘಟ್ಟ. ಎರಡನ್ನು ಯಾರು ಮುಂದುವರಿಸಬಯಸುತ್ತಾರೆ? ಸಹಜಭಾವದ ನಿಜಐಕ್ಯದ - ಯಾರ ಒತ್ತಾಯಕ್ಕೂ ಪೂಜಿಸದ ತಂತಾನೆ ಒಲಿಯುವ ಹಾಗೂ ತನ್ನಲ್ಲೆ ನಮ್ಮನ್ನು ಐಕ್ಯಗೊಳಿಸಕೊಳ್ಳುವ ಯಾವ ದೈವವುಂಟೊ ಅದನ್ನು ತೋರಲೆಂದೆ ಈ ದೈವಗಳನ್ನೆಲ್ಲ ಓಡಿಸುತ್ತಾರೆ. ಅರೇಬಿಯಾದಲ್ಲಿ ಮಹಮ್ಮದ್ ನಿರಾಕಾರ ದೈವವನ್ನು ತೋರಿ ತನ್ನ ಕಾಲದ ಜನರನ್ನು ಕಾಡುತ್ತಲಿದ್ದ ಭಯಕಾರಕ ದೈವಗಳನ್ನೆಲ್ಲ ಪುಡಿಮಾಡಿದರು. ಆದರೆ ಅವರ ದೈವ ದ್ವೈತಿ. ಆ ದೇವರು ತಂದೆಯಲ್ಲ; ದೇವರಿಗೆ ಯಾರೂ ಹೆಂಡತಿಯಿಲ್ಲ. ಮಕ್ಕಳಿಲ್ಲ, ನಾವೆಲ್ಲ ಗುಲಾಮರು, ಹಾಗಾಗಿ ಅಲ್ಲಿ ಅಂಜಿಕೆ ಉಳಿಯುತ್ತದೆ. ಈ ತತ್ವಕ್ಕಿಂತ ಭಿನ್ನ ಅಣ್ಣನವರದು. ದಾಸ್ಯಭಾವದಿಂದಾದರಂಭವಾದರೂ ಕಡೆಯಲ್ಲಿ ಶಿವೈಕ್ಯದಲ್ಲಿ ಕೊನೆಗೊಳ್ಳುವುದು ಇದು. ಇವರು ಕಲ್ಪಿಸಿಕೊಂಡ ದೈವವೂ ನಿರಾಕಾರದೈವವೇ. "ಜಗದಗಲ ಮುಗಿಲಗಲ ಮಿಗೆಯಗಲದ" ದೈವವೆ. ಆದರೆ ಅದೇ ದೈವ ತನ್ನ ಲೀಲೆಯಿಂದ ಕೃಪೆಯಿಂದ ಕರಸ್ಥಲದಲ್ಲಿ ಚುಳುಕಾಗಿ ಬಂದಿದ್ದಾನೆ. ಅವನು ನಿರಾಕಾರ; ಲೀಲಾರ್ಥವಾಗಿ ಸಾಕಾರ. ಅವನ ಸಾಧನೆ ಎಲ್ಲಿಯತನಕ?

(ಮುಂದುವರಿಯುತ್ತದೆ)







# ಗಾಂಧೀಜಿಯವರ ಕರ್ನಾಟಕ ಯಾತ್ರೆ

- ಎಂ.ಬಿ. ಪಾಟೀಲ
ನಿವೃತ್ತ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್,
ನಂ. ೩೫೬, ಶ್ರೀ ರೇಣುಕಾ, ೬ನೇ ಅಡ್ಡರಸ್ತೆ, ಚನ್ನಮ್ಮನಕೆರೆ ಅಂಗಳ,
ಬನಶಂಕರಿ ೩ನೇ ಹಂತ, ಬೆಂಗಳೂರು-೭೦

ಗಾಂಧೀಜ ಮೊಟ್ಟ ಮೊದಲು ಬೆಂಗಳೂರಿಗೆ ಬಂದದ್ದು ಮೇ ೮. ೧೯೧೫ ರಲ್ಲಿ, ಕಸ್ತೂರಬಾ ಅವರೊಂದಿಗೆ. ಈ ಭೇಟಿಯನ್ನು ಏರ್ಪಡಿಸಲು ಮೂಲಕಾರಣರು ಹಿರಿಯ ರಾಜಕಾರಿಣಿ, ಸಾಹಿತಿ, ಡಿ.ವಿ.ಜಿ.ಯವರು. ಮದ್ರಾಸಿನಿಂದ ಬಂದು, ರೈಲು ನಿಲ್ದಾಣದಿಂದ ಸುಮಾರು ಅರ್ಧ ಮೈಲಿ ದೂರದ ಆನಂದರಾವ್ ವೃತ್ತದ ಬಳಿಯ ಬಿಡಾರಕ್ಕೆ ಗಾಂಧೀಜಿ ನಡೆದುಕೊಂಡೇ ಬಂದರು. ಅವರ ಅಂದಿನ ಬಿಡಾರ ಆನಂದರಾವ್ ವೃತ್ತದ ಬಳಿ ಇರುವ ಇಂದಿನ ಹೆಬ್ಬಾರ ವೈಷ್ಣವ ಸಭಾದ ಎದುರಿನ ಕಟ್ಟಡ. (ಮೊದಲಿನ ಖಾದಿ ಗ್ರಾಮೋದ್ಯೋಗ ಕೇಂದ್ರ ಕಛೇರಿ ಆಗಿತ್ತು) ಉತ್ಸಾಹಿ ಜನರು ಅವರನ್ನು ಗಾಡಿಯಲ್ಲಿ ಕೂಡಿಸಿ ಎಳೆದುಕೊಂಡು ಹೋಗಲು ಸಿದ್ಧರಾಗಿದ್ದರು. ಅದಕ್ಕೆ ಅವರು ಅವಕಾಶ ಕೊಡಲಿಲ್ಲ. ಗಾಂಧೀಜಿಯವರ ಸರಳ ವೇಷಭೂಷಣ ಕಂಡು ಬೆಂಗಳೂರಿನ ಜನ ಬೆರಗಾದರು. ಅಚ್ಚ ಕಾಠೇವಾಡಿಯ ಹಾಗೆ ಒಂದು ಕಿಸೆಯ ಅಂಗಿ. ಗುಜರಾತಿ ಪೇಟಾ. ಧೋತಿಯನ್ನು ಧರಿಸಿದ್ದರು. ಇದೇ ಸಂದರ್ಭದಲ್ಲಿ ಗೋಖಲೆ ಸಾರ್ವಜನಿಕ ಸಂಸ್ಥೆಯ ಪ್ರಾರಂಭೋತ್ಸವವನ್ನು ನೆರವೇರಿಸಿದರು. ಗೋಖಲೆಯವರು ಭಾವಚಿತ್ರ ಅನಾವರಣ ಮಾಡಿದರು. ಅದೇ ಕಾಲಕ್ಕೆ ಬೆಂಗಳೂರಿನಲ್ಲಿ ಪ್ರಥಮ ಸಾಹಿತ್ಯ ಸಮ್ಮೇಳನ ನಡೆಯಿತು.



## ಗಾಂಧೀಜಿ-ತಿಲಕರ ಸಮಾಗಮ

೧೯೧೬ರಲ್ಲಿ ಗಾಂಧೀಜಿಯವರು ಬೆಳಗಾವಿಗೆ ನೀಡಿದ ಭೇಟಿಯು ಉತ್ತರ ಕರ್ನಾಟಕದ ಪ್ರಥಮ ಭೇಟಿಯಾಗಿತ್ತು. ಏಪ್ರಿಲ್ ೧೯೧೬ರಂದು ಬೆಳಗಾವಿಯಲ್ಲಿ ಪ್ರಾಂತೀಯ ಪರಿಷತ್ತನ್ನು ಕರೆಯಲಾಗಿತ್ತು. ಮಂಡಾಲೆಯ ಸೆರೆಮನೆಯಲ್ಲಿ ಆರು ವರ್ಷ ಕಳೆದ ನಂತರ ೧೯೧೪ರಲ್ಲಿ ಬಿಡುಗಡೆಯಾಗಿ ತಿಲಕರು ಕರ್ನಾಟಕಕ್ಕೆ ಬರುತ್ತಿದ್ದುದು ಇದು ಮೊದಲನೆಯದಾಗಿತ್ತು. ಈ ಪರಿಷತ್ತಿನ ಕಾರ್ಯವ್ಯಾಪ್ತಿ ಮಹಾರಾಷ್ಟ್ರವನ್ನು ಒಳಗೊಂಡಿತ್ತು. ಲೋಕಮಾನ್ಯ ತಿಲಕರು ಇದನ್ನು ಗೊತ್ತುಮಾಡಿದ್ದರು. ಗಂಗಾಧರರಾವ್ ದೇಶಪಾಂಡೆಯವರು ಪರಿಷತ್ತಿನ ಕಾರ್ಯದರ್ಶಿಗಳಾಗಿದ್ದರು ಗಂಗಾಧರರಾವ್ ದೇಶಪಾಂಡೆಯವರಿಗೆ ಈ ಸಮ್ಮೇಳನಕ್ಕೆ ತಾವು ಖಂಡಿತವಾಗಿಯೂ ಬರುವ ವಿಷಯವಾಗಿ ಗಾಂಧೀಜಿ ಹೀಗೆ ಬರೆದಿದ್ದರು. "ಸತ್ತರೆ ಒಂದೇ ಹೋಯಿತು ಪುನಃ ಇಲ್ಲದಿದ್ದರೆ ನಾನು ಪರಿಷತ್ತಿಗೆ ಬರದಂತೆ ಯಾರೂ ತಡೆಯಲಾರರು". ಈ ರೀತಿಯ ಉತ್ತರಕ್ಕೆ ಕಾರಣ ಮಂದಗಾಮಿಗಳಲ್ಲಿ ಕೆಲವರು ತಿಲಕರು ಸಮ್ಮೇಳನಕ್ಕೆ ಬರುವುದಿಲ್ಲವೆಂದು ಬಹುಜನರ ಊಹೆಯಾಗಿತ್ತು. ಆದರೆ ಕರ್ನಾಟಕದ ಮೇಲಿನ ಪ್ರೀತಿಯಿಂದ ಗಾಂಧೀಜಿ ಸಮ್ಮೇಳನಕ್ಕೆ ಬಂದೇಬಿಟ್ಟರು. ಈ ಸಮ್ಮೇಳನ ರಾಷ್ಟ್ರೀಯತೆಯ ಎರಡು ಮಹಾಪಕ್ಷಗಳ (ಮಂದಗಾಮಿ ಮತ್ತು

ತೀವ್ರಗಾಮಿಗಳ) ಸಮ್ಮಿಳನವಾಗಿತ್ತು. ಮಂದಗಾಮಿಗಳಾದ ಗಾಂಧೀಜಿ ಮತ್ತು ತೀವ್ರಗಾಮಿಗಳಾದ ತಿಲಕರು ಪರಸ್ಪರ ಭಿನ್ನಾಭಿಪ್ರಾಯ ಮರೆತು ರಾಷ್ಟ್ರೀಯ ಹಿತದೃಷ್ಟಿಯಿಂದ ಬೆಳಗಾವಿ ಸಮ್ಮೇಳನದಲ್ಲಿ ಒಂದಾದರು. ಅವರಿಬ್ಬರ ಭೇಟಿಯನ್ನು ಏರ್ಪಡಿಸಲು ಈ ಸಮ್ಮೇಳನದ ಮೂಲಕ ಗಂಗಾಧರರಾಯರು ಕಾರಣಕರ್ತರಾದರು..

ಇದಾದ ನಾಲ್ಕು ವರ್ಷಗಳ ನಂತರ ದೇಶದಲ್ಲಿ ಹೆಚ್ಚುತ್ತಿರುವ ಹಿಂದೂ ಮುಸ್ಲಿಂ ಜಾತಿಯ ದೊಂಬಿಗಳನ್ನು ಉಪಶಮನ ಮಾಡಲು, ಮತೀಯ ಸಾಮರಸ್ಯ ಹೆಚ್ಚಿಸಲು ಸಹಾಯಕವಾಗುವಂತೆ ಶೌಖತ್ ಅಲಿಯವರ ಸಂಗಡ ಗಾಂಧೀಜಿ ದೇಶಸಂಚಾರ ಕೈಗೊಂಡರು. ೧೯೨೦ರ ನವೆಂಬರ್ ೮ರಂದು ಪುನಃ ಗಾಂಧೀಜಿ ಬೆಳಗಾವಿಗೆ ಭೇಟಿಯನ್ನು ನೀಡಿದರು. ಇದರ ಉದ್ದೇಶ ಖಿಲಾಫತ್ ಚಳುವಳಿಯ ಬಗ್ಗೆ ಜನರಲ್ಲಿ ತಿಳುವಳಿಕೆ ನೀಡುವುದು ಮತ್ತು ಮುಸ್ಲಿಮರಲ್ಲಿ ಮತೀಯ ಭಾವೈಕ್ಯತೆಯನ್ನು ಬೆಳೆಸುವುದಾಗಿತ್ತು. ಇಂತಹ ದೊಡ್ಡ ಸಭೆ ಈ ಹಿಂದೆ ಬೆಳಗಾವಿಯಲ್ಲಿ ನಡೆದಿರಲಿಲ್ಲ ಎಂದು ವರದಿ ಮಾಡಲಾಗಿದೆ. ಮಾರುತಿ ಗಲ್ಲಿಯ ಮಾರುತಿ ದೇವಾಲಯದಲ್ಲಿ ಬೆಳಗಾವಿಯ ಸಭೆ ನಡೆಯಿತು. ಬಾಪೂರೊಂದಿಗೆ ಬೆಳಗಾವಿಗೆ ಬಂದಿದ್ದ ಶೌಕತ್ ಅಲಿಯನ್ನು ನೋಡಲು ಮಹಿಳೆಯರು ದೊಡ್ಡ ಪ್ರಮಾಣದಲ್ಲಿ ಸಭೆಗೆ ಬಂದಿದ್ದರು. ಇದು ಬಾಪೂಗೆ ಪ್ರಿಯವಾಯಿತು. ನಮ್ಮ ಹಿಂದು ಹೆಂಗಸರು ಮುಸ್ಲೀಮರನ್ನು ಎಲ್ಲಿಯವರೆಗೆ ತಮ್ಮ ಅಣ್ಣ ತಮ್ಮಂದಿರಂತೆ ತಿಳಿಯುವುದಿಲ್ಲವೋ ಅಲ್ಲಿಯವರೆಗೆ ನಮ್ಮ ದುರದೃಷ್ಟವೇ ನೀಗದು ಎಂದು ಉಪದೇಶ ಮಾಡಿದರು. ಮಹಿಳೆಯರನ್ನು ಉದ್ದೇಶಿಸಿ ದಿನವೂ ಒಂದು ಗಂಟೆ ನೂಲನ್ನು ನೂತು ಆ ನೂಲನ್ನು ದೇಶಕ್ಕೆ ದಾನ ಕೊಡಬೇಕೆಂದು ಮನವಿ ಮಾಡಿದರು. ಬಿಜಾಪುರದ ಒಂದು ಸಭೆಯಲ್ಲಿ "ರಾಟೆಯು, ಬರಗಾಲಕ್ಕೆ ಒಂದು ವಿಮೆ ಇದ್ದಂತೆ. ಮನೆಯಲ್ಲಿ ರಾಟಿ ತಿರುಗಬೇಕು. ಇದರಿಂದ ಸ್ವದೇಶ ಪ್ರೇಮ ಬೆಳೆಯುತ್ತದೆ. ಪರದೇಶದ ವಸ್ತ್ರ ಬಹಿಷ್ಕಾರರಾಗುತ್ತದೆ" ಎಂದು ಪ್ರತಿಯೊಂದು ಪ್ರತಿಯೊಂದು ಸಾರ್ವಜನಿಕ ಸಭೆಯಲ್ಲಿ ಬಾಪೂ ಉಪದೇಶ ಮಾಡುತ್ತಿದ್ದರು. ದಿನಾಂಕ ೧೯.೮.೧೯೨೦ ರಂದು ಮಂಗಳೂರಿಗೆ ಶೌಕತ್ ಅಲಿಯವರೊಂದಿಗೆ ಭೇಟಿ ನೀಡಿದರು. ಖಿಲಾಫತ್ ಚಳುವಳಿಯ ಬಗ್ಗೆ ಸುದೀರ್ಘ ಭಾಷಣ ಮಾಡಿದರು. ಭಾರತದ ಪ್ರಗತಿ ಹಿಂದು ಮುಸ್ಲಿಮರ ಐಕ್ಯತೆಯಲ್ಲಿ ಅಡಗಿದೆ ಎಂದು ಉದ್ಗರಿಸಿದರು. ಮಂಗಳೂರಿನವರಿಗೆ, ಕಾಸರಗೋಡಿನವರಿಗೆ, ಖಿಲಾಫತ್ ಚಳುವಳಿ ಸೇರಲು ಆದೇಶ ನೀಡಿದರು. "ಗಾಂಧೀಜಿ ಮುಸ್ಲೀಮ್ ಧರ್ಮ ಸ್ವೀಕರಿಸಲಿಲ್ಲ. ಅದೊಂದನ್ನು ಬಿಟ್ಟರೆ ಅವರು ಮುಸ್ಲೀಮರ ಹಿತಕ್ಕಾಗಿ ಬೇಕಾದುದೆಲ್ಲವನ್ನೂ ಮಾಡಿದರು".

**ಕಾಂಗ್ರೆಸ್ ಅಧಿವೇಶನ ೧೯೨೪**

ಬೆಳಗಾವಿಯಲ್ಲಿ ೩೯ನೆಯ ಕಾಂಗ್ರೆಸ್ ಅಧಿವೇಶನ ೧೯೨೪ರ ಡಿಸೆಂಬರ್‌ನಲ್ಲಿ, ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ, ವಿಜಯನಗರ ಮಂಟಪದಲ್ಲಿ, ಬಹು ವಿಜೃಂಭಣೆಯಿಂದ ನಡೆಯಿತು. ಗಾಂಧೀಜಿಯವರು ತಮ್ಮ ಜೀವಿತ ಕಾಲದಲ್ಲಿ ಕಾಂಗ್ರೆಸ್ ಅಧ್ಯಕ್ಷ ಪದವಿಯನ್ನು ಅಲಂಕರಿಸಿದ್ದು ಈ ಒಂದು ಅಧಿವೇಶನದಲ್ಲಿ ಮಾತ್ರ. ಕರ್ನಾಟಕದ ಬಗ್ಗೆ ಸಮಗ್ರ ಮಾಹಿತಿಯನ್ನು ನೀಡುವ ಕರ್ನಾಟಕದ ಒಂದು ಕೈಪಿಡಿ ಎಂಬ ಪುಸ್ತಕವನ್ನು ಗಾಂಧೀಜಿಗೆ ಅರ್ಪಿಸಲಾಯಿತು. ಈ ಸಮ್ಮೇಳನದಲ್ಲಿ ಕರ್ನಾಟಕದ ಗಾಂಧಿ ಎಂದೇ ಪ್ರಸಿದ್ಧರಾಗಿದ್ದ ಹರ್ಡೇಕರ್ ಮಂಜಪ್ಪನವರು (೧೮೮೮-೧೯೪೭) ಗಾಂಧೀಜಿಯವರಿಗೆ ಮತ್ತು ಇತರ ನಾಯಕರಿಗೆ ಬಸವೇಶ್ವರರ ವಿಚಾರವಾಗಿ ಹಿಂದಿಯಲ್ಲಿ ಮತ್ತು ಮರಾಠಿಯಲ್ಲಿ ಬರೆದ ಪುಸ್ತಕವನ್ನು ಅರ್ಪಿಸಿದರು. ಈ ಸಮ್ಮೇಳನದಲ್ಲಿಯೇ ಗಾಂಧೀಜಿಯವರು "ತಾವು ಅಂದು ಕೈಗೊಂಡಿದ್ದ ಅಸ್ಪೃಶ್ಯತಾ ನಿವಾರಣೆ, ಮಹಿಳೆಯರಿಗೆ ಸಮಾನ ಹಕ್ಕು, ಸಾಮಾಜಿಕ ನ್ಯಾಯ ಮುಂತಾದ ಕಾರ್ಯಕ್ರಮಗಳನ್ನು ಬಸವೇಶ್ವರು ೮೦೦ ವರ್ಷ ಮೊದಲೇ ಪ್ರಾರಂಭಿಸಿದರು". ನಾನು ಇಂದು ಅವುಗಳ ಅನುಕರಣೆ ಮಾಡುತ್ತಿರುವುದಾಗಿ ಹೇಳಿದರು. ಬಸವೇಶ್ವರರ ಬಗ್ಗೆ ಗಾಂಧೀಜಿ ಆಡಿದ ಈ ಮಾತು ಅನೇಕ ವೀರಶೈವರಿಗೆ ಕಾಂಗ್ರೆಸ್ ಸೇರಲು ಪ್ರೇರಕವಾಯಿತು. ಹರ್ಡೇಕರ್ ಮಂಜಪ್ಪನವರು ಮತ್ತು ಇತರರು ಉತ್ತರ ಕರ್ನಾಟಕದ ಲಿಂಗಾಯಿತರು ಕಾಂಗ್ರೆಸ್ ಸೇರಲು ಬಹು ವಿಧದಲ್ಲಿ ಸಹಾಯಕರಾದರು. ಮುಂದಿನ ದಶಕಗಳಲ್ಲಿ ಕಾಂಗ್ರೆಸ್ ವೀರಶೈವರಿಂದ ಒಡಗೂಡಿದ ದೈತ್ಯಶಕ್ತಿಯಾಗಿ ಬೆಳೆಯಲು ಈ ಸಮ್ಮೇಳನ ಸಹಾಯಕವಾಯಿತು. ಇದೇ ಅಧಿವೇಶನದಲ್ಲಿ ಕರ್ನಾಟಕ ಏಕೀಕರಣ ಪರಿಷತ್ತು ಇಲ್ಲಿಯೇ ಸೇರಿತ್ತು. ಇದುವರೆಗೆ ಕೇವಲ ಬ್ರಾಹ್ಮಣರಿಗೆ ಮೀಸಲಾಗಿದ್ದ ಕಾಂಗ್ರೆಸ್, ಬ್ರಾಹ್ಮಣೇತರ ಪಕ್ಷವಾಗಿಯೂ ರೂಪುಗೊಂಡಿತು.

ಬೆಳಗಾವಿಯ ಸಮ್ಮೇಳನಕ್ಕೆ (೧೯೨೪) ಅಂದಿನ ಮೈಸೂರು ಸರ್ಕಾರದವರು ಸಾಕಷ್ಟು ನೆರವು ನೀಡಿದರು. ಭಾರತದ ರಾಜಕಾರಣದಲ್ಲಿ ಮೈಸೂರು ಸಂಸ್ಥಾನ ಪ್ರತ್ಯಕ್ಷವಾಗಿ ಭಾಗವಹಿಸಿದ ಪ್ರಸಂಗ ಇದೇ ಮೊದಲನೆಯದಾಗಿತ್ತು. ಬೆಳಗಾವಿಯ ಕಾಂಗ್ರೆಸ್ ವಸ್ತುಪ್ರದರ್ಶನಕ್ಕೆಂದು ತಮ್ಮ ಸಂಗ್ರಹಾಲಯದ ಹಲವಾರು ವಸ್ತುಗಳನ್ನು ಮೈಸೂರು ದರ್ಬಾರು ಕಳಿಸಿದ್ದಲ್ಲದೇ ತಮ್ಮ ಸ್ವಂತ ವೆಚ್ಚದಲ್ಲಿ ಸಂಗೀತಗಾರರನ್ನು, ವೀಣೆ ಶೇಷಣ್ಣ ಅವರನ್ನು ಕಳಿಸಿದ್ದರು. ಗಾಂಧೀಜಿಯವರು ಶೇಷಣ್ಣನವರ ವೀಣಾವಾದನವನ್ನು ಸುಮಾರು ಒಂದೂವರೆ ಗಂಟೆ ಕೇಳಿ ಆನಂದಪಟ್ಟರು ಎಂದು ತಿಳಿದು ಬರುವುದು. ಈ ಪ್ರಮುಖ





ಸಮ್ಮೇಳನದಲ್ಲಿ ಸರದಾರ್ ಪಟೇಲ್, ರಾಜೇಂದ್ರಪ್ರಸಾದ್, ರಾಜಗೋಪಾಲಾಚಾರ್ಯ, ಸರೋಜಿನಿ ನಾಯ್ಡು, ಅಲೀ ಸಹೋದರರು, ಮೋತಿಲಾಲ ನೆಹರು, ಲಾಲಾಲಜಪತರಾಯ್ ಮುಂತಾದ ಗಣ್ಯರು, ಮಂದಗಾಮಿಗಳು ಮತ್ತು ತೀವ್ರಗಾಮಿಗಳು ಬಂದಿದ್ದರು. ಈ ಅಧಿವೇಶನದಲ್ಲಿ ಬೇರ ಬೇರೆ ವಿಷಯವಾಗಿ ೧೬ ಸಮ್ಮೇಳನಗಳು ನಡೆದವು.

ಗಾಂಧೀಜಿಯವರಿಗೆ ಅತೀ ಪ್ರಿಯವಾದ ಮತ್ತು ಕಳಕಳಿಯ ವಸ್ತು ಖಾದಿಯಾಗಿತ್ತು. ಗಾಂಧೀಜಿಯವರು ಜನರು ಕೇವಲ ಖಾದಿಧಾರಿಗಳಾದರೆ ಸಾಲದು, ಸ್ವತಃ ನೂಲು ತೆಗೆದು ಅದರಿಂದ ತಯಾರಿಸಿದ ಖಾದಿ ತೊಡಬೇಕೆಂದು ಉಪದೇಶ ಮಾಡುತ್ತಿದ್ದರು. "ಖಾದಿಯು ಕೇವಲ ಒಂದು ಬಟ್ಟೆಯಾಗಿರದೇ ಲಕ್ಷಾಂತರ ಬಡವರ ಜೀವನಾಧಾರವಾಗಿದೆ" ಎಂದು ಅವರು ಬಲವಾಗಿ ನಂಬಿದ್ದರು.

**ನಂದಿಯಲ್ಲಿ ವಿಶ್ರಾಂತಿ**

೧೯೨೭ರಲ್ಲಿ ಗಾಂಧೀಜಿ ಅನಾರೋಗ್ಯದಿಂದ ಬಳಲುತ್ತಿದ್ದಾಗ ಸುಮಾರು ನಾಲ್ಕು ತಿಂಗಳ ಕಾಲ ಮೈಸೂರು ಸರ್ಕಾರದ ಅತಿಥಿಗಳಾಗಿ ನಂದಿಬೆಟ್ಟದಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ವೈದ್ಯರು ಗಾಂಧೀಜಿಗೆ ಸಂಪೂರ್ಣ ವಿಶ್ರಾಂತಿ ಹೇಳಿದ್ದರೂ "ನೂಲದೇ ನಾನು ಬದುಕಲಾರೆ" ಎಂದು ನೂಲುವುದನ್ನು ಬಿಡಲಿಲ್ಲ. ಭಾರತದ ಗ್ರಾಮೀಣ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಖಾದಿ ಕೈಗಾರಿಕೆ ಬಹು ಮಹತ್ವದ ಪಾತ್ರವನ್ನು ವಹಿಸಬಲ್ಲದೆಂದು ಅವರು ಬಹುವಾಗಿ ನಂಬಿದ್ದರು. ಪ್ರಾರಂಭದಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರ ಅಭಿಪ್ರಾಯ ಇದಕ್ಕೆ ವಿರುದ್ಧವಾಗಿತ್ತು. ಈ ವಿಷಯವಾಗಿ ಅವರಿಬ್ಬರಲ್ಲಿ ಅನೇಕ ಚರ್ಚೆಗಳು ನಡೆದುದೂ ಉಂಟು. ಸರ್ಕಾರಿ ನೌಕರರು ಖಾದಿ ತೊಡಬೇಕೆಂದು ಗಾಂಧೀಜಿಯವರ ಒತ್ತಾಯವಾಗಿತ್ತು. ಇದಕ್ಕೆ ಸರ್ಕಾರವೇ ಅಡ್ಡಿಯಾಗಿದೆ ಎಂದು ತಿಳಿದು ಬಂದಾಗ್ಗ ಈ ಕುರಿತು ದಿವಾನರಾಗಿದ್ದ ಸರ್. ಮಿರ್ಜಾ ಅವರನ್ನು ಒತ್ತಾಯಿಸಿದರು. ಅದಕ್ಕೆ ಅವರು ಸರ್ಕಾರದ ಅಭ್ಯಂತರ ಏನೂ ಇಲ್ಲ ಎಂದು ತಮ್ಮ ಒಪ್ಪಿಗೆಯನ್ನು ಸೂಚಿಸಿದರು. ಗಾಂಧೀಜಿಯವರನ್ನು ಭೇಟಿಯಾಗಲು ಬರುತ್ತಿದ್ದ ಶ್ರೀಮಂತ ವರ್ಗದ ರೇಷ್ಮೆ ಸೀರೆಯ ಮಹಿಳೆಯರಿಗೆ ಖಾದಿ ಸೀರೆಗಳನ್ನು ಉಡಲು ಒತ್ತಾಯಿಸುತ್ತಿದ್ದುದಲ್ಲದೇ, ಖಾದಿ ಪ್ರಚಾರದ ಕಾರ್ಯಕರ್ತರ ಸಭೆ ಸಮಾರಂಭಗಳಿಗೆ ತಪ್ಪದೇ ಹೋಗುತ್ತಿದ್ದರು. ಮೈಸೂರು ಸಂಸ್ಥಾನದಲ್ಲಿ ಪ್ರವಾಸದಲ್ಲಿದ್ದಾಗ ಹರಿಜನರ ಉದ್ಧಾರಕ್ಕಾಗಿ ಸರ್ಕಾರ ಕೈಗೊಂಡ ಹಲವಾರು ಕ್ರಮಗಳನ್ನು ಕುರಿತು ಗಾಂಧೀಜಿ ಮೆಚ್ಚುಗೆ ಸೂಚಿಸಿದರು. ಆದರೆ ಸರ್ಕಾರದ ವತಿಯಿಂದ ನಡೆಸುತ್ತಿದ್ದ ಆದಿಕರ್ನಾಟಕ ವಿದ್ಯಾರ್ಥಿಗಳ ಹಾಸ್ಟೆಲ್‌ನಲ್ಲಿ ದಲಿತ ವಿದ್ಯಾರ್ಥಿಗಳು ಖಾದಿ ಧರಿಸದೇ ಇದ್ದುದು ಅವರಿಗೆ ಅಸಮಾಧಾನ ಉಂಟಾಗಿತ್ತು ಎಂದು ಹಲವಾರು ಸಂದರ್ಶನಗಳಿಂದ ತಿಳಿದು ಬರುವುದು. ಬೆಂಗಳೂರಿನಲ್ಲಿ ಇರುವಾಗ ಸುಪ್ರಸಿದ್ಧ ಕಲಾವಿದ ವೆಂಕಟಪ್ಪನವರನ್ನು ಹರಸಿ ಆಶೀರ್ವದಿಸಿದರು. "ರಾಟೆಯು ನಿಮಗೆ ಹಿಡಿಸಿದರೆ ಗ್ರಾಮಸ್ಥರ ಜೀವನಕ್ಕೆ ರಾಟೆಯ ಮಹತ್ವವನ್ನು ಸಾರುವ ಚಿತ್ರಗಳನ್ನು ಬಿಡಿಸಿದರೆ ತಮಗೆ ಇನ್ನೂ ಹೆಚ್ಚು ಸಂತೋಷವಾಗುವುದು" ಎಂದರು. ಮೈಸೂರು ಸಂಸ್ಥಾನದ ಬಗ್ಗೆ ತಮ್ಮ ಮೆಚ್ಚುಗೆಯನ್ನು ಸೂಚಿಸುತ್ತ ಇಲ್ಲಿ ಕಾರ್ಯಕ್ಷಮತೆಗೆ ಏನೂ ಕೊರತೆ ಇಲ್ಲ. ನಿಮ್ಮಲ್ಲಿ ಒಬ್ಬ ಸುಪ್ರಸಿದ್ಧ ಇಂಜಿನಿಯರ್ ಇದ್ದಾರೆ, ಸುಪ್ರಸಿದ್ಧ ಸಂಗೀತಗಾರರು ಇದ್ದಾರೆ, ಇವರ ಜೊತೆಗೆ ಸುಪ್ರಸಿದ್ಧ ನೂಲುಗಾರರನ್ನು ಸಿದ್ಧಗೊಳಿಸಿ ಎಂದು ಮೈಸೂರಿನಿಂದ ಹೊರಡುವ ಮುಂಚೆ ಭಾಷಣ ಮಾಡಿದರು.

ದಿನಾಂಕ ೨೧.೭.೧೯೨೭ ರಂದು ಬೆಂಗಳೂರಿನಲ್ಲಿ ಕಬೀರದಾಸ ಎಂಬ ಹಿಂದಿ ನಾಟಕವನ್ನು ಪಂಡಿತ ತಾರಾನಾಥರು ನಡೆಸಿಕೊಟ್ಟರು. ನಾಟಕದಿಂದ ಸಂದಾಯವಾದ ಹಣವನ್ನು ಖಾದಿ ನಿಧಿಗೆ ನೀಡಲಾಯಿತು. ನಾಟಕದ ನಟರಲ್ಲಿ ಅನೇಕರು ಖಾದಿಧಾರಿಗಳಾಗಿದ್ದುದು ನಾಟಕದ ವೈಶಿಷ್ಟ್ಯವಾಗಿತ್ತು. ಈ ನಾಟಕದ ಮೂಲಕ ತಾರಾನಾಥರು ಹಿಂದಿ ಪ್ರಚಾರ, ಖಾದಿ ಪ್ರಚಾರ ಎರಡನ್ನೂ ಸಾಧಿಸಿದರು. ಬೆಂಗಳೂರಿನಲ್ಲಿ ತಾತಾ ವಿಜ್ಞಾನ ಮಂದಿರ, ಮಹಿಳಾ ಸಮಾಜ, ವಿದ್ಯಾರ್ಥಿ ಸಮುದಾಯ ಮುಂತಾದ ಸಂಸ್ಥೆಗಳು ಖಾದಿ ನಿಧಿಗೆ ಹಣ ಕೊಡಿಸಿಕೊಟ್ಟರು.

**ಹರಿಜನ ಕೇರಿಗಳಿಗೆ ಭೇಟಿ**

ಗಾಂಧೀಜಿಯವರು ಎಲ್ಲಿಯೇ ಪ್ರವಾಸಕ್ಕೆ ಹೋಗಲಿ, ಬಿಡುವು ಮಾಡಿಕೊಂಡು ಹರಿಜನಕೇರಿಗೆ ಹೋಗಿ ಅವರ ಯೋಗಕ್ಷೇಮ ವಿಚಾರಿಸದೇ ಇರುತ್ತಿರಲಿಲ್ಲ. ಅಸ್ಪೃಶ್ಯತೆಗೆ ಶಾಸ್ತ್ರಗಳ ಆಧಾರ ಇಲ್ಲ ಎಂಬುದು ಗಾಂಧೀಜಿಯವರ ಬಲವಾದ ನಂಬಿಕೆಯಾಗಿತ್ತು. ಕೆಲವು ಪಂಡಿತರು ಇದಕ್ಕೆ ವಿರುದ್ಧವಾಗಿಯೂ ಗಾಂಧೀಜಿಯವರೊಂದಿಗೆ ಸಾಕಷ್ಟು ವಾದವಿವಾದ ಮಾಡಿದ್ದರು. ಹರಿಜನರು ಗೋಮಾಂಸ ತಿನ್ನುವುದನ್ನು, ಹೆಂಡ ಕುಡಿಯುವುದನ್ನು ಮೊದಲು ಬಿಡಬೇಕು. ವಿದ್ಯಾವಂತರಾಗಬೇಕು ಎಂದು ಅವರು ಹೋದಲ್ಲೆಲ್ಲಾ ಉಪದೇಶಿಸುತ್ತಿದ್ದರು. ಹರಿಜನರ ಕಲ್ಯಾಣಕ್ಕೆ ನಿಧಿಯನ್ನು ಕೂಡಿಸುತ್ತಿದ್ದರು. ಹರಿಜನರಿಗೆ ಸವರ್ಣೀಯರು ದೇವಾಲಯಗಳ ಪ್ರವೇಶವನ್ನು ಅಡ್ಡಿಪಡಿಸಬಾರದು ಎಂದು ಒತ್ತಾಯ ಮಾಡುತ್ತಿದ್ದರು. ಹರಿಜನ ಚಳುವಳಿ ಪ್ರಾರಂಭವಾದ ನಂತರ ಮೊಟ್ಟಮೊದಲಿಗೆ ಹರಿಜನರಿಗೆ ಮುಕ್ತವಾದ ದೇವಾಲಯ ಸಿರ್ಸಿಯ ಮಾರಿಕಾಂಬೆಯದು ಎಂದು ತಿಳಿದು ಬರುತ್ತದೆ.

ಆದರಂತೆ ಸೊಂಡೂರಿನ ಅರಸರು ಈ ಮೊದಲೇ ಕುಮಾರ ಸ್ವಾಮಿಯ ದೇವಾಲಯಕ್ಕೆ ಹರಿಜನರ ಪ್ರವೇಶವನ್ನು ಮುಕ್ತಗೊಳಿಸಿದ್ದರು. ಸೊಂಡೂರಿನ ರಾಜಸಭೆಯಲ್ಲಿ ೧೯೩೨ರಲ್ಲಿ ಒಬ್ಬ ಚುನಾಯಿತ ಹರಿಜನ ಪ್ರತಿನಿಧಿಯಿದ್ದರು. ಈ ವಿಷಯವಾಗಿ ಗಾಂಧೀಜಿ ಸೊಂಡೂರಿನ ತಮ್ಮ ಭೇಟಿಯಲ್ಲಿ ಮೆಚ್ಚುಗೆ ಸೂಚಿಸಿದ್ದಾರೆ. ಚಿತ್ರದುರ್ಗದ ಜಗದ್ಗುರುಗಳು ಅಗಾಧ ಸಂಸ್ಕೃತ ಪಂಡಿತರಾಗಿದ್ದರು. ವೇದಶಾಸ್ತ್ರಗಳಲ್ಲಿ ಅಸ್ಪೃಶ್ಯತೆಗೆ ಶಾಸ್ತ್ರಾಧಾರ ಇಲ್ಲವೆಂದು ಗಾಂಧೀಜಿಯ ಮಾತಿಗೆ ಹಾವೇರಿಯಲ್ಲಿ ಹೇಳಿಕೆ ನೀಡಿ ಗಾಂಧೀಜಿಯವರ ಕೆಲಸಗಳನ್ನು ಪ್ರೋತ್ಸಾಹಿಸಿದರು. ಆದರೆ ಸ್ವಾಮಿಗಳು ಸೂಚಿಸಿದಂತೆ ಹರಿಜನ ಬದಲಿಗೆ ಹರಜನ ಎಂಬ ಪದವನ್ನು ಬಳಸುವುದು ಸೂಕ್ತ ಅಲ್ಲ; ದೇವರು ಒಬ್ಬ, ನಾಮ ಹಲವು ಎಂಬುದು ಗಾಂಧೀಜಿಯವರ ವಾದವಾಗಿತ್ತು.

**ದೊಡ್ಡಮೇಟಿಯವರ ದೊಡ್ಡ ಸಾಧನೆ**

ಜಕ್ಕಲಿ ಧಾರವಾಡ ಜಿಲ್ಲೆಯ ರೋಣ ತಾಲ್ಲೂಕಿನ ಒಂದು ಹಳ್ಳಿ. ಅಲ್ಲಿಯ ಶ್ರೀಮಂತ ಜಮೀನ್ದಾರ ಅಂದಾನಪ್ಪ ದೊಡ್ಡಮೇಟಿ (೧೯೦೮-೧೯೭೨)ಯವರು ಕೈಗೊಂಡಿದ್ದ ಹರಿಜನ ಏಳ್ಗೆಯ ಕೆಲಸ ಕಾರ್ಯಗಳನ್ನು ಮೆಚ್ಚಿ ವೀಕ್ಷಿಸಲು ಗಾಂಧೀಜಿ ಹೋಗಿದ್ದರು. ದೊಡ್ಡಮೇಟಿಯವರು ನಿಜಕ್ಕೂ ದೊಡ್ಡವರು. ಹರಿಜನರಿಂದ ತಮಗೆ ಬರಬೇಕಾದ ಸಾಲವನ್ನು ಸೂಟ್ ಬಿಟ್ಟು ಜನಾನುರಾಗಿಗಳಾಗಿದ್ದರು. ದೊಡ್ಡಮೇಟಿಯವರ ಪ್ರಭಾವದಿಂದ ಅನೇಕ ಹರಿಜನರು ಗೋಮಾಂಸ, ಕುಡಿತವನ್ನು ಬಿಟ್ಟಿದ್ದನ್ನು ಗಾಂಧೀಜಿ ಕಂಡರು. ಕರ್ನಾಟಕ ಏಕೀಕರಣದ ಕನಸು ಕಂಡವರಲ್ಲಿ, ಅದಕ್ಕೆ ಹೋರಾಟ ಮಾಡಿದವರಲ್ಲಿ ದೊಡ್ಡಮೇಟಿ ಪ್ರಮುಖರು. ಇದೇ ರೀತಿ ತುಮಕೂರಿನಲ್ಲಿ ಒಂದು ಘಟನೆ ನಡೆಯಿತು.

ಗಾಂಧೀಜಿ ತುಮಕೂರಿನ ಆದಿಕರ್ನಾಟಕ ವಸತಿ ಔದ್ಯೋಗಿಕ ಶಿಕ್ಷಣ ಕೇಂದ್ರಕ್ಕೆ ಭೇಟಿಕೊಟ್ಟರು. ಅಲ್ಲಿ ಮಾಡಿದ ರಾಗಿ ರೊಟ್ಟಿಯಲ್ಲಿ ಕೆಲವೊಂದನ್ನು ತೆಗೆದುಕೊಂಡು ಬಂದರು. ಊಟದ ಸಮಯದಲ್ಲಿ ಸ್ವಾಗತ ಸಮಿತಿಯ ಸವರ್ಣೀಯ ಸದಸ್ಯರಿಗೆ ಅವುಗಳನ್ನು ಬಡಿಸುವಂತೆ ಸೂಚಿಸಿದರು. ಅನಿವಾರ್ಯವಾಗಿ ಕೆಲವರು ಬಡಿಸಿಕೊಂಡು ಊಟ ಮಾಡಿದರು. ಕೆಲವರಿಗೆ ತುಂಬಾ ಕಸಿವಿಸಿ ಎನಿಸಿತು. ಅದರಂತೆ ಹುಬ್ಬಳ್ಳಿಯ ಭೇಟಿಯಲ್ಲಿ ಸರ್ದಾರ ವೀರನಗೌಡರ ಪತ್ನಿ ನಾಗಮ್ಮನವರಿಗೆ ತಮ್ಮ ಮಕ್ಕಳೊಂದಿಗೆ ಇಬ್ಬರು ಹರಿಜನ ಹುಡುಗಿಯರನ್ನು ಸಾಕಿ ಬೆಳೆಸಲು ಸೂಚಿಸಿದರು. ಅವರು ಗಾಂಧೀಜಿಯವರ ಮಾತನ್ನು ರಾಮ ವಚನ ಎಂದು ತಿಳಿದು ತಾರಾ ಮತ್ತು ಮಧುರಾ ಎಂಬ ಬಾಲಿಕೆಯರನ್ನು ತಮ್ಮ ಮಕ್ಕಳೊಂದಿಗೆ ಸಾಕಿದರು ಎಂದು ತಮ್ಮ ಸ್ಮೃತಿಗಳಲ್ಲಿ ವಿವರಿಸಿರುವರು. ಇದೇ ವಿಷಯಕ್ಕೆ ಸಂಬಂಧಪಟ್ಟಂತೆ ಬೆಂಗಳೂರಿನಲ್ಲಿ ಇದ್ದಾಗ ಮಿಥಿಕ್ ಸೊಸೈಟಿಯ ಸದಸ್ಯರನ್ನು ಉದ್ದೇಶಿಸಿ ಮಾತನಾಡುತ್ತ ಅಸ್ಪೃಶ್ಯತೆಯ ಕಳಂಕ ಈ ದೇಶಕ್ಕೆ ಏಕೆ ಬಂತು? ಎಂದು ಸಂಶೋಧನೆ ಮಾಡಲು ಇತಿಹಾಸ ತಜ್ಞರನ್ನು ಕೇಳಿಕೊಂಡರು. ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಯಲ್ಲಿ ಶಿಕ್ಷಕರನ್ನು ಉದ್ದೇಶಿಸಿ ಮೈಸೂರು ದೇಶದಲ್ಲಿ ಪಂಡಿತರು, ಶೂದ್ರರಿಗೆ, ಪಂಚಮರಿಗೆ ಸಂಸ್ಕೃತವನ್ನು ಕಲಿಸುವುದಕ್ಕೆ ಹಿಂಜರಿಯುವುದು ಶುದ್ಧ ತಪ್ಪು, ಯಾವ ಶಾಸ್ತ್ರಗಳಲ್ಲೂ ಇದನ್ನು ಹೇಳಿಲ್ಲ. ಬರೀ ಜನಿವಾರ ಮಾಡಿಕೊಳ್ಳುವ ಮಟ್ಟಿಗೆ ನೂತರೆ ಸಾಲದು, ನಿಮ್ಮ ಬಟ್ಟೆಗಳನ್ನು ಸ್ವತಃ ನೀವೇ ನೂತು ನೇಯಿಸಿಕೊಳ್ಳಬೇಕೆಂದು ಹೇಳಿದರು. ಕೊಡಗಿಗೆ ಭೇಟಿ ನೀಡಿದಾಗ ಸುಪ್ರಸಿದ್ಧ ಬರಹಗಾರ್ತಿ ಕೊಡಗಿನ ಗೌರಮ್ಮ ಅವರ ಮನೆಗೆ ಸ್ವತಃ ಹೋಗಿ ಆಭರಣ ಪಡೆದ ಘಟನೆ ಅವಿಸ್ಮರಣೀಯವಾದುದು. ಗಾಂದೀಜಿಯವರನ್ನು ತಮ್ಮ ಮನೆಗೆ ಕರೆದು ಹರಿಜನ್ನರ ನಿಧಿಗೆ ತಮ್ಮ ಆಭರಣ ನೀಡುವುದು ಬರಹಗಾರ್ತಿ ಬಯಕೆ ಆಗಿತ್ತು. ಸ್ಥಳೀಯ ಪ್ರಮುಖರು ಈ ವಿಷಯವಾಗಿ ಗಮನ ಹರಿಸಲಿಲ್ಲ. ಗಾಂಧೀಜಿಯನ್ನು ತಮ್ಮಲ್ಲಿಗೆ ಆಹ್ವಾನಿಸಲು ಬರಹಗಾರ್ತಿ ಮುಂಜಾನೆಯಿಂದ ಸಂಜೆಯವರೆಗೆ ಉಪವಾಸ ಮಾಡಬೇಕಾಯಿತು. ವಿಷಯ ತಿಳಿದ ಗಾಂಧೀಜಿ ಅವರ ಮನೆಗೆ ಭೇಟಿಕೊಟ್ಟು, ಹರಿಜನರ ನಿಧಿಗೆ ಕೊಟ್ಟ ಆಭರಣವನ್ನು ಪುನಃ ತೊಡಬಾರದು ಎಂಬ ನಿಯಮದೊಂದಿಗೆ ಆಭರಣಗಳನ್ನು ಪಡೆದರು. ಆ ಬರಹಗಾರ್ತಿಯ ಹೆಬ್ಬಯಕೆಯನ್ನು ಪೂರ್ತಿಗೊಳಿಸಿದರು. ಗಾಂಧೀಜಿಯವರ ಉಪದೇಶದಿಂದ ಪ್ರಭಾವಿತರಾದ ಅನೇಕ ಹರಿಜನರು ಸಭೆಯಲ್ಲಿ ಗಾಂಧೀಜಿ ಹೇಳಿದ ಮಾರ್ಗಗಳನ್ನು ಪಾಲಿಸಲು ಬದ್ಧರಾಗಿರುವುದಾಗಿ ಪಣ ತೊಡುತ್ತಿದ್ದರು.

●

**ಶ್ರದ್ಧಾಂಜಲಿ**

**ಪತ್ರಕರ್ತ ಹುಚ್ಚೇಶ್ವರ ಮೋದಿ ನಿಧನ**

ಹುಬ್ಬಳ್ಳಿಯಿಂದ ಪ್ರಕಟವಾಗುತ್ತಿದ್ದ 'ಕನ್ನಡಿಗ' ಮಾಸ ಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸುತ್ತಿದ್ದ ಹುಚ್ಚೇಶ್ವರ ಮೋದಿ ಅವರು ದಿನಾಂಕ ೨೫.೯.೧೯೯೯ರಂದು ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಕಳೆದ ಅನೇಕ ದಶಕಗಳಿಂದ ಅವರು ಪತ್ರಿಕಾ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸುತ್ತಿದ್ದು, ಶ್ರೀಮಠದೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದರು. ಎಚ್.ವಿ. ಮೋದಿ ಅವರ ನಿಧನ ಪತ್ರಿಕಾ ಕ್ಷೇತ್ರಕ್ಕೆ ತುಂಬಲಾರದ ನಷ್ಟ. ಅವರ ಆತ್ಮಕ್ಕೆ ಪರಶಿವನು ಚಿರಶಾಂತಿಯನ್ನು ನೀಡಲಿ ಎಂದು 'ಸಿದ್ಧಗಂಗಾ' ಸಂತಾಪವನ್ನು ವ್ಯಕ್ತಪಡಿಸುತ್ತದೆ.





# ಯುವಕರಿಗೆ ಸ್ಫೂರ್ತಿ ನೀಡುವ ಶರಣ ಚಳುವಳಿ ಒಂದು ಅವಲೋಕನ

- ಎಚ್.ಎಸ್. ಸಿದ್ಧಗಂಗಪ್ಪ,
೫೩/೧, 'ಶಿವಕೃಪ', ಮೊದಲನೆ ಮುಖ್ಯರಸ್ತೆ,
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ,
ವಿಜಯನಗರ, ಬೆಂಗಳೂರು-40

ಇತಿಹಾಸವನ್ನು ಅವಲೋಕಿಸಿದಾಗ ನಾವು ಪ್ರಮುಖವಾಗಿ ಎರಡು ರೀತಿಯ ಚಳುವಳಿಯನ್ನು ಕಾಣುತ್ತೇವೆ. ಒಂದು : ಸಮಾಜದ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಸೈದ್ಧಾಂತಿಕ ಹಿನ್ನಲೆಯಲ್ಲಿ ಮಾಡುವ ಚಳುವಳಿ. ಮತ್ತೊಂದು, ಸ್ವಾರ್ಥದ ಹಿನ್ನಲೆಯಲ್ಲಿ ವೈಯಕ್ತಿಕ ಪ್ರತಿಷ್ಠೆಯನ್ನು ತೋರಿಸುವುದಕ್ಕಾಗಿ ಮಾಡುವ ಚಳುವಳಿ. ಮೊದಲನೆ ಚಳುವಳಿಯಲ್ಲಿ ಸ್ವಾರ್ಥವಿರುವುದಿಲ್ಲ; 'ಸರ್ವೇಜನೋ ಸುಖಿನೋ ಭವಂತು' ಎಂಬ ತತ್ವ, ಆದರ್ಶದ ಮುಂಬೆಳಕಿನಲ್ಲಿ ಮಾಡುವ ಚಳುವಳಿ. ಅದು ಸಾಮಾಜಿಕ ಚಳುವಳಿಯಾಗಿರಬಹುದು, ಸಾಂಸ್ಕೃತಿಕ ಚಳುವಳಿಯಾಗಿರಬಹುದು. ಇಲ್ಲವೆ, ಧಾರ್ಮಿಕ ಚಳುವಳಿಯಾಗಿರಬಹುದು. ಈ ಚಳುವಳಿಗಳಲ್ಲಿ ಭಾಗವಹಿಸುವವರ ಉದ್ದೇಶ ಒಂದೇ ಆಗಿರುತ್ತದೆ. ಉದಾ. ಸ್ವಾತಂತ್ರ್ಯ ಚಳುವಳಿ. ಆ ಸಂದರ್ಭದಲ್ಲಿ ನಡೆದ ಅನೇಕ ಚಳುವಳಿಗಳು, ಅದು ಚಲೇಜಾವ್ ಚಳುವಳಿ ಇರಬಹುದು, ಕ್ವಿಟ್ ಇಂಡಿಯಾ ಚಳುವಳಿ ಇರಬಹುದು, ಉಪ್ಪಿನ ಸತ್ಯಾಗ್ರಹ ಇರಬಹುದು. ಇತ್ತೀಚೆಗೆ ನಡೆದ ಗೋಕಾಕ್ ಚಳುವಳಿ ಇರಬಹುದು. ಇಲ್ಲಿ ಅನ್ಯಾಯದ ವಿರುದ್ಧ ಸಾಮೂಹಿಕ ಪ್ರತಿಭಟನೆಯನ್ನು ಕಾಣಬಹುದು. ಈ ಎಲ್ಲಾ ಚಳುವಳಿಗಳು ರಕ್ತಪಾತ ರಹಿತವಾದ, ಶಾಂತಿಯುತ ಚಳುವಳಿಗಳು.

ಎರಡನೆ ರೀತಿಯ ಚಳುವಳಿ ಸ್ವಾರ್ಥದ ಹಿನ್ನೆಲೆಯಲ್ಲಿ ಪ್ರೇರೇಪಿತವಾದ ಚಳುವಳಿ. ಅದು ರಾಜಕೀಯ ಚಳುವಳಿಯಾಗಿರಬಹುದು, ಮತೀಯ ಚಳುವಳಿಯಾಗಿರಬಹುದು. ಇವತ್ತು ಆಚರಿಸುವ ಅನೇಕ ಬಂದ್‌ಗಳು, ಪ್ರತಿಭಟನೆಗಳು, ಸಮಷ್ಠಿಯ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾಡುವ ಚಳುವಳಿಗಳಲ್ಲ. ಇಲ್ಲಿ ಒಬ್ಬರನ್ನು ತುಳಿದು, ತಾನು ಮೆರೆಯುವ ಪ್ರವೃತ್ತಿಗೆ ಹೆಚ್ಚು ಪ್ರಾಧಾನ್ಯ.

ಈ ಎರಡು ರೀತಿಯ ಚಳುವಳಿಗಳಲ್ಲಿ ಯುವಶಕ್ತಿಯ ಸದುಪಯೋಗ ಹಾಗೂ ದುರ್ಬಳಕೆಯಾಗುತ್ತಿದೆ. ಚಳುವಳಿಯ ಮುಂಚೂಣಿಯಲ್ಲಿರುವವರು ಯುವಶಕ್ತಿಯನ್ನು ಬಳಸಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಅನೇಕ ಸಂದರ್ಭದಲ್ಲಿ ಸರಿಯಾದ ಮಾರ್ಗದರ್ಶನವಿಲ್ಲದೆ ಅವರ ಶಕ್ತಿ; ಹರಿದ ದೋಣಿಯಂತಾಗುತ್ತದೆ. ನಾವಿಕನಿಲ್ಲದ ಹಡಗಿನಂತಾಗುತ್ತದೆ.

ಈ ಹಿನ್ನೆಲೆಯಲ್ಲಿ ೧೨ನೇ ಶತಮಾನದಲ್ಲಿ ನಡೆದ ಶರಣ ಚಳುವಳಿಯನ್ನು ಗಮನಿಸಬೇಕಾಗುತ್ತದೆ. ಆ ಚಳುವಳಿ ಯುವಕರಿಗೆ ಯಾವ ರೀತಿಯ ಸ್ಫೂರ್ತಿಯನ್ನು ನೀಡಿತು ಎಂಬುದನ್ನು ಅವಲೋಕಿಸಬೇಕಾಗುತ್ತದೆ. ಇದಕ್ಕೆ ಮುನ್ನ ಯುವ ಜನತೆಯ ಪ್ರವೃತ್ತಿಯ ಬಗ್ಗೆಯೂ ಚಿಂತನೆ ಮಾಡುವುದು ಅಗತ್ಯವೆನಿಸುತ್ತದೆ.

ಯುವಜನತೆಯ ಸಾಮಾನ್ಯ ಗುಣ ಹತ್ತು ಜನರ ಮಧ್ಯೆ ತಾವು ಎದ್ದು ಕಾಣಬೇಕೆಂಬುದು. ಅದು ಸಹಜವಾದುದೇ. ಮನಶಾಸ್ತ್ರದ ದೃಷ್ಟಿಯಿಂದ ನೋಡುವಾಗಲೂ, ತಾವು ಬೇರೆಯವರಿಗಿಂತಲೂ ಭಿನ್ನವಾಗಿ ಕಾಣಬೇಕು, ತೋರಿಸಿಕೊಳ್ಳಬೇಕೆಂಬ ಪ್ರವೃತ್ತಿ ಗುಪ್ತಗಾಮಿನಿಯಾಗಿ ಸದಾ ಹರಿಯುತ್ತಲೇ ಇರುತ್ತದೆ. ಸೌಮ್ಯ ಗುಣವಿದ್ದವರಲ್ಲಿ ಪರಂಪರೆಯಲ್ಲಿರುವ ಕೆಲವು ಒಳ್ಳೆಯ ಅಂಶಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಹೊಸತನ್ನು ತೋರಿಸಬೇಕೆನ್ನುವ ಬಯಕೆ ಸದಾ ಅವರಲ್ಲಿ ಜಾಗೃತವಾಗಿರುತ್ತದೆ. ಅಸ್ತಿತ್ವ ತೋರಿಸಿಕೊಳ್ಳಲು ಅವರು ಎಂದೂ ಹಿಂದಾಗುವುದಿಲ್ಲ.

ಆದರೆ ಕ್ರಾಂತಿಕಾರಕ ಮನೋಧರ್ಮವುಳ್ಳ ಯುವಕ, ಸೌಮ್ಯ ಗುಣವುಳ್ಳ ಯುವಕನಿಗಿಂತ ಭಿನ್ನವಾಗಿ ಕಾಣುತ್ತಾನೆ. ಆತನಲ್ಲಿ ಪರಂಪರೆಯಲ್ಲಿರುವ ಕೆಲವು ಅಂಶಗಳನ್ನು ನಿರ್ಲಕ್ಷ್ಯ ಮಾಡುವ, ಉದಾಸೀನ ತೋರುವ ಅಥವಾ ತಿರಸ್ಕರಿಸುವ ಮನೋಧರ್ಮವನ್ನು ಕಾಣುತ್ತೇವೆ. ಆವೇಶ, ಕೆಚ್ಚು, ರೋಷ ಇವೆಲ್ಲದರ ಪ್ರತೀಕವಾಗಿ ಕಾಣುತ್ತೇವೆ. ಆದರೆ ಅವನಲ್ಲಿನ ಅನುಭವ ಪಕ್ವವಾದಂತೆ ತನ್ನದೇ ಆದ ದಾರಿಯನ್ನು ಕಂಡುಕೊಳ್ಳುತ್ತಾನೆ.

ಸಮಾಜದಲ್ಲಿನ ಜಡ್ಡುಗಟ್ಟಿದ ಸಂಪ್ರದಾಯ, ಮೂಢ ನಂಬಿಕೆಗಳು, ನಿಷೇಧಗಳು, ಕಟ್ಟುಪಾಡುಗಳು ಇವೆಲ್ಲವೂ ಸಾಹಸ

ಪ್ರವೃತ್ತಿಯುಳ್ಳ ಯುವಕರಿಗೆ ಅಡ್ಡಗಾಲು ಹಾಕುವುದರಿಂದ ಯುವಕ ಸಹಜವಾಗಿಯೇ ಅವುಗಳನ್ನು ವಿರೋಧಿಸುತ್ತಾನೆ. ಅವುಗಳ ವಿರುದ್ಧ ಪ್ರತಿಭಟಿಸುತ್ತಾನೆ. ಜೊತೆಗೆ ಅವನು ಸದಾ ಸಮಕಾಲೀನ ಅಥವಾ ಸಮುದಾಯದ ಚಟುವಟಿಕೆಗಳಲ್ಲಿ ಆಗುವ ಒಟ್ಟಾರೆ ಬದಲಾವಣೆಗಳನ್ನು ಗಮನಿಸುತ್ತಾನೆ.

ಉದಾ : ಅಂಬೇಡ್ಕರ್ ಬುದ್ಧನ ತತ್ವಗಳನ್ನು ಅರ್ಥ ಮಾಡಿಕೊಂಡಿದ್ದರಿಂದ, ಸಮಾಜದಲ್ಲಿನ ಅನ್ಯಾಯದ ವಿರುದ್ಧ ಸಿಡಿದೆದ್ದು, ಬೌದ್ಧ ಧರ್ಮವನ್ನು ಸ್ವೀಕರಿಸಿದರು. ಆದರೆ ಗಾಂಧೀಜಿ ಹಾಗೆ ಮಾಡಲಿಲ್ಲ, ಬುದ್ಧನ ಅಹಿಂಸಾ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ತಮ್ಮದೇ ಆದ ದಾರಿಯಲ್ಲಿ ನಡೆದರು. ಅಹಿಂಸೆ ಅವರ ಜೀವನದ ಪರಮಧ್ಯೇಯವಾಯಿತು. ಅಷ್ಟರ ಮಟ್ಟಿಗೆ ಬುದ್ಧ ಪ್ರಭಾವ ಬೀರಿದ.

ಈ ಹಿನ್ನೆಲೆಯಲ್ಲಿ ೧೨ನೇ ಶತಮಾನದ ಸಂದರ್ಭವನ್ನು ಗಮನಿಸಬೇಕಾಗುತ್ತದೆ. ಶೈವ ಪಂಥದಲ್ಲಿದ್ದ ಲೋಪ-ದೋಷಗಳು, ಸಮಾಜದಲ್ಲಿನ ಮೂಢನಂಬಿಕೆಗಳು, ಅಂಧಶ್ರದ್ಧೆ, ಜಡ್ಡುಗಟ್ಟಿದ ವಾತಾವರಣ ಬಸವಣ್ಣನವರ ಗಮನಕ್ಕೆ ಬಂತು. ಸಮಾಜದಲ್ಲಿದ್ದ ವೈಪರೀತ್ಯಗಳಿಗೆ ಕಾಯಕಲ್ಪ ನೀಡುವ ದೃಷ್ಟಿಯಿಂದ ಆದರ್ಶ ಸಮಾಜ ಕಟ್ಟಲು ಪ್ರಯತ್ನಿಸಿದರು. ಆದರೆ ಬಸವಣ್ಣನವರು ಒಟ್ಟಾರೆ ಸಮಾಜದ ಪರಿವರ್ತನೆಗೆ ಸೈದ್ಧಾಂತಿಕವಾಗಿ ಹೋರಾಟ ನಡೆಸಿದರು. ೧೨ನೇ ಶತಮಾನದ ಚಳುವಳಿಯಲ್ಲಿ ನಾವು ಮುಖ್ಯವಾಗಿ ಕಾಣುವ ಅಂಶವೆಂದರೆ ತಮಗೆ ಅನಿಸಿದ್ದನ್ನು ಧೈರ್ಯವಾಗಿ ಪ್ರತಿಭಟಿಸುವುದರ ಜೊತೆಗೆ ಪ್ರಶ್ನಿಸುವ ಧೈರ್ಯವನ್ನು ತೋರಿಸಿದುದು.

ಆದ್ಯ ವಚನಕಾರ ದಾಸಿಮಯ್ಯ ದೇವರನ್ನು ಭಕ್ತಿಯಿಂದ ಆರಾಧಿಸಿದರೂ, ಧೈರ್ಯದಿಂದ ದೇವರನ್ನೇ ಪ್ರಶ್ನೆ ಮಾಡಿದ ರೀತಿ ಬಸವಣ್ಣನವರಿಗೆ ಸ್ಫೂರ್ತಿ ನೀಡಿತು.

**ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ ಹಿರಿದಪ್ಪ**
**ರಾಜ್ಯವನಿತ್ತಡೆ ಒಲ್ಲೆ, ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ**
**ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥಾ.**

ದಾಸಿಮಯ್ಯ ಶರಣರನ್ನು, ಶಿವಭಕ್ತರನ್ನು ದೇವರಿಗಿಂತ ಒಂದು ಮೆಟ್ಟಿಲು ಏರಿಸಿದ್ದಾನೆ. ದೇವರಿಗಿಂತ ದೇವರ ಭಕ್ತ ಹೆಚ್ಚು ಎಂಬುದನ್ನು ತೋರಿಸಿದ ದಾಸಿಮಯ್ಯ; ಬಸವಣ್ಣನವರ ಮೇಲೆ ಅಗಾಧ ಪ್ರಭಾವವನ್ನು ಬೀರಿದ್ದಾನೆ. ಬಸವಣ್ಣನವರ ವಚನದಲ್ಲಿ ದಾಸಿಮಯ್ಯನ ವಚನದ ಛಾಯೆ ಕಾಣುವುದನ್ನು ಈ ಕೆಳಗಿನ ವಚನದಲ್ಲಿ ಗಮನಿಸಬಹುದು :

**ಊರ ಮುಂದೆ ಹಾಲಹಳ್ಳ ಹರಿಯುತ್ತಿರಲು ಓರೆಯಾವಿನ ಬೆನ್ನಲಿ**
**ಹರಿಯಲದೇಕಯ್ಯ ಲಜ್ಜೆಗೆಡುಲೇಕೆ ನಾಣುಗೆಡಲೇಕೆ?**
**ಕೂಡಲ ಸಂಗಮದೇವಯ್ಯನುಳ್ಳನ್ನಕ್ಕ**
**ಬಿಜ್ಜಳನ ಭಂಡಾರವೆನಗೇಕಯ್ಯ?**

ಅವನ ದಿಟ್ಟತನ ಮೆಚ್ಚುವಂತಹದು! ಒಂದು ಕಡೆ ದಾಸಿಮಯ್ಯ ದೇವರನ್ನು ಕುರಿತು ಹೀಗೆ ಹೇಳುತ್ತಾನೆ :

**ಒಡಲಗೊಂಡವ ಹಸಿವ**
**ಒಡಲಗೊಂಡವ ಹುಸಿವ**
**ಒಡಲುಗೊಂಡವನೆಂದು ಜಡಿದೊಮ್ಮೆ ನುಡಿಯದಿರು**
**ನೀನೆನ್ನಂತೊಮ್ಮೆ ಒಡಲುಗೊಂಡು ನೋಡು ರಾಮನಾಥಾ.**

ಹಸಿವಿಗೆ ಒಡಲೇ ಮೂಲ, ಒಡಲ ಹಂಗಿಗೆ ಹಸಿ ಏನು, ಹುಸಿ ಏನು! ಎಂಬುದು ಹೊಟ್ಟೆ ಹಸಿದವರಿಗೆ ಗೊತ್ತು. ಒಡಲ ಸಂಚು-ಹೊಂಚು ಹೊಟ್ಟೆ ಹಸಿವಿಲ್ಲದೆ ಮಾತನಾಡು ವವರಿಗೆ ಒಡಲ ಒಡೆವ ಒಡಕು ಗೊತ್ತಾಗುವುದಿಲ್ಲ ಎಂದು ತನ್ನ ಆರಾಧ್ಯ ದೈವನಾದ ರಾಮನಾಥನನ್ನೇ ಪ್ರಶ್ನೆ ಮಾಡಿದ್ದಾನೆ. ನೀನೊಮ್ಮೆ ನನ್ನಂತೆ ಹೊಟ್ಟೆ ಹಸಿದುಕೊಂಡು ನೋಡಿ ಮಾತನಾಡು, ಆಗ ನಿನಗೇ ಗೊತ್ತಾಗುತ್ತದೆ ಎಂದು ಕೇಳುವ ಮಾನಸಿಕ ಸ್ಥೈರ್ಯ ಬಸವಣ್ಣನವರಿಗೆ ಸ್ಫೂರ್ತಿ ನೀಡುತ್ತದೆ. ಮತ್ತೊಂದು ಕಡೆ ದಾಸಿಮಯ್ಯ :

**ಒಡಲುಗೊಂಡವ ನಾನು; ಪ್ರಾಣವಿಡಿದವ ನೀನು,**
**ಎನ್ನೊಡಲ ಸಂಚವ ನೀಬಲ್ಲೆ; ನಿನ್ನ ಪ್ರಾಣದ ಸಂಚುವ ನಾಬಲ್ಲೆ,**
**ಇದು ಕಾರಣ ಇದು ಎನ್ನೊಡಲಲ್ಲ - ನಿನ್ನೊಡಲು,**
**ನಿನ್ನ ಪ್ರಾಣವೆನ್ನಲ್ಲಿ ಅಡಗಿದ ಭೇದವ ನೀಬಲ್ಲೆ, ನಾಬಲ್ಲೆ ರಾಮನಾಥಾ**

ಎಂದು ಹೇಳಿದ್ದಾನೆ.

ಶಿವಲೆಂಕ ಮಂಚಣ್ಣ. ಭಕ್ತಿ ಭಂಡಾರಿ ಬಸವಣ್ಣನ ಭಕ್ತಿಯನ್ನೇ ಪ್ರಶ್ನಿಸುವ ದಿಟ್ಟತನ ತೋರಿದ್ದಾನೆ.

**ಭಕ್ತ ನಾನೇ ಎಂದು ತನ್ನ ತಾನೇ ನಿಶ್ಚಯಿಸುವನ್ನಬರ**
**ವಿರಕ್ತ ನಾನೇ ಎಂದು ತನ್ನ ತಾನೇ ಬೀಗುವವನ್ನಬರ**
**ಅಂಧಕ ಸಮೂಹದಲ್ಲಿದ್ದು ನಗೆಯ ಕೇಳಿ, ತಾ ಕಾಣದೆ ನಗುವಂತೆ,**
**ಉಭಯದಿರುವ ಮೆಚ್ಚ ಶಿವಲೆಂಕನೊಡೆಯ**
**ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು.**

ತನಗೆ ಸರಿಯೆನಿಸಿದ್ದನ್ನು ಮುಕ್ತವಾಗಿ ಪ್ರಶ್ನಿಸುವ ರೀತಿ ಆರೋಗ್ಯಕರ ಸಮಾಜ ನಿರ್ಮಾಣಕ್ಕೆ ಬುನಾದಿಯಾಗುತ್ತದೆ. ಅಮುಗೆ ರಾಯಮ್ಮ ದಿಟ್ಟತನದಿಂದ ವಿರಕ್ತರನ್ನು ಮೂದಲಿಸುವ ರೀತಿ ಬೆರಗುಗೊಳಿಸುವಂತಹದು.





"ಅನುಭಾವಿ ಅನುಭಾವಿಗಳೆಂಬ ಅಜ್ಞಾನಿಗಳ ಮುಖವ ನೋಡಲಾಗದು. ಕಂಗಳ ಮುಂದಣ ಕಾಮ, ಮುಂದಣ ಆಸೆ; ಅಂಗದಲ್ಲಿ ಅಹಂಕಾರವಾಗಿಪ್ಪವರ ಅನುಭಾವಿಗಳೆಂಬೆನೆ. ಸೂಳೆಯ ಮನೆಯಲ್ಲಿಪ್ಪ ಗವುಡಿಯಂತೆ, ತಮ್ಮ ತಮ್ಮ ಹಿರಿಯತನವ ಮುಂದುಗೊಂಡ ಕುರಿಗಳಂತೆ, ತಿರುಗುವ ಜಡರುಗಳ ಅನುಭಾವಿಗಳೆಂಬೆನೆ! ಹತ್ತ್ರದ ಕೂಡಿ ಕೊಂಡು ಇಕ್ಕೆ ಎರೆವವರ ಮನೆಗೆ ಹೋಗಿ ಭಕ್ತಿ ಬಿನ್ನಹವ ಕೈಗೊಂಡರೆ ಬೆಕ್ಕು ಹಾಲು ಕುಡಿದಂತೆ ಆತ್ಮಶಿಷ ಶಾಂಗುಲನೆಂದು ಘಟವ ಹೊರೆವ ಮಿಟ್ಟೆಯ ಭಂಡರು ಕಟ್ಟಿಗೆ ಮಣ್ಣಹಾಕಿ ಹೊಟ್ಟೆಯ ಹೊರೆವವನಂತೆ, ಇಷ್ಟಲಿಂಗವನರಿಯದೆ ಸತ್ಯರೆಂದು ಘಟವ ಹೊರೆವ ಘಟಕರ್ಮಿಗಳ ಮುಖವ ನೋಡಲಾಗದು ಅಮುಗೇಶ್ವರ ಲಿಂಗವೆ"

ಶಿವಶರಣೆ ಅಮುಗೆ ರಾಯಮ್ಮ ಮತ್ತೊಂದು ವಚನದಲ್ಲಿ ವಿರಕ್ತರನ್ನು ಕುರಿತು ಕಟುವಾಗಿಯೇ ಟೀಕಿಸಿದ್ದಾಳೆ.

**"ವಿರಕ್ತ ವಿರಕ್ತ ಎಂಬ ಹಾದಿಕಾರರ ವಿರಕ್ತರೆನ್ನಬಹುದೆ!**
**ಕಾವಿಯ ಹೊದ್ದು ತಿರುಗುವ ಜೀವಗಳ್ಳರು ವಿರಕ್ತರೆ!**
**ನಾಮವ ಹೊತ್ತುಕೊಂಡು ತಿರುಗುವ ಗಾವಿಲರ ವಿರಕ್ತರೆಂಬರೆ,**
**ಅಘೋರ ನರಕ ತಪ್ಪದು ಅಮುಗೇಶ್ವರ ಲಿಂಗವೆ"**

ಅಮುಗೆ ರಾಯಮ್ಮನಲ್ಲಿದ್ದ ಧೈರ್ಯ; ಯಾರ ಮುಲಾಜು ಇಲ್ಲದೆ ನೇರವಾಗಿ ಟೀಕಿಸುವ ಎದೆಗಾರಿಕೆ ಮೆಚ್ಚುವಂತಹದು. ಹಿರಿಯರು ದಾರಿ ತಪ್ಪಿದಾಗ ಪ್ರಶ್ನಿಸುವ ಪ್ರವೃತ್ತಿ ಯುವಕರಲ್ಲಿ ಬರಬೇಕು. ಆದರೆ ಸಂಪ್ರದಾಯದ ನಾಲ್ಕು ಗೋಡೆಗಳ ಮಧ್ಯೆ ಇರುವ ಯುವಕರು, ಹಿರಿಯರ ಬಗ್ಗೆ ಗೌರವ ಇಟ್ಟುಕೊಂಡಿರುವವರು ಪ್ರಶ್ನೆ ಮಾಡುವ ಮಟ್ಟಕ್ಕೆ ಹೋಗುವುದಿಲ್ಲ.

ಸಾಮಾನ್ಯವಾಗಿ ಯುವಕರು ಜಾತಿ, ವರ್ಣ, ಭೇದದ ವಿರುದ್ಧ ಸಿಡಿದೇಳುವ ಮನಸ್ಥಿತಿಯನ್ನು ಹೊಂದಿರುತ್ತಾರೆ. ಯುವಕರಲ್ಲಿ ಆತ್ಮವಿಶ್ವಾಸ ಮೂಡಿಸುವ ನಿಟ್ಟಿನಲ್ಲಿ ಶರಣ ಚಳುವಳಿ ಪ್ರಭಾವ ಬೀರಿತು. ಶರಣ ಚಳುವಳಿ ಬಹುತೇಕ ಸಾಮಾನ್ಯ ಜನರ ಭಾವನೆಗಳಿಗೆ ಸ್ಪಂದಿಸುವಂತಹ ರೀತಿಯಲ್ಲಿ ನಡೆದುದರಿಂದ ಎಲ್ಲರಿಗೂ ಪ್ರಿಯವಾಯಿತು, ಜನಪ್ರಿಯವಾಯಿತು. ಶರಣ ಚಳುವಳಿ ಜನರನ್ನು ಆಕರ್ಷಿಸಲು ಮುಖ್ಯ ಕಾರಣ; ಸಾಮಾನ್ಯ ಜನರಿಗೂ ತಿಳಿಯುವಂತೆ ಹೇಳಲು ಬಳಸಿಕೊಂಡ ಸರಳ ಭಾಷೆ, ಸಮಾಜದೊಡನೆ ಬೆರೆಯುವ ಹಾಗೂ ಜನರನ್ನು ತಮ್ಮವರನ್ನಾಗಿ ನೋಡಿಕೊಳ್ಳುವ ಮನೋಧರ್ಮವನ್ನು ಶರಣರಲ್ಲಿ ಕಾಣಬಹುದು.

ಶರಣ ಚಳುವಳಿ ಅನುಭವವಿಲ್ಲದೆ ಕಟ್ಟಿದ ಗಾಳಿ ಗೋಪುರವಲ್ಲ. ತಾವು ಮಾಡುವ ಕಾಯಕ. ಪಡೆದ ಅನುಭವವನ್ನು ಅಭಿವ್ಯಕ್ತಪಡಿಸಿದರು. ಅನುಭವದಿಂದ ಅನುಭಾವಕ್ಕೇರಿದರು. ಇದರಿಂದ ಬದುಕಿನಲ್ಲಿ ಗಟ್ಟಿತನ ಕಾಣಲು ಸಾಧ್ಯವಾಯಿತು. ಯಾವುದೇ ವಿವೇಚನಾಶೀಲ ಯುವಕ ಇಂಥ ಚಳುವಳಿಯನ್ನು ಗಂಭೀರವಾಗಿ ಪರಿಗಣಿಸುತ್ತಾನೆ. ಜೊತೆಗೆ ಇಷ್ಟಪಡುತ್ತಾನೆ. ಶರಣರು ನುಡಿದಂತೆ ನಡೆದು ತೋರಿಸಿದ ಶರಣರ ಚಳುವಳಿ ಯುವಕರಿಗೆ ಅಪ್ಯಾಯಮಾನವಾಯಿತು. ಅಂತರ್ಜಾತಿ ವಿವಾಹ, ಸಹಭೋಜನ, ಎಲ್ಲರೂ ಒಂದೇ ಎಂಬ ಮಾನವೀಯ ವಿಶಾಲದೃಷ್ಟಿ ಸಹಜವಾಗಿ ಅವರನ್ನು ತನ್ನೆಡೆಗೆ ಆಕರ್ಷಿಸಿತು.

ಶ್ರೇಷ್ಠ ವಚನಕಾರ್ತಿಯಾದ ಅಕ್ಕಮಹಾದೇವಿಯ ಒಂದೊಂದು ನುಡಿಯೂ ಅರ್ಥಪೂರ್ಣವಾದುದು, ಯುವ ಜನಾಂಗಕ್ಕೆ ಸ್ಫೂರ್ತಿ ತುಂಬುವಂತಹದು, ವಿವೇಚನಶೀಲವಾದುದು. ಆಕೆಯ ಪ್ರತಿಯೊಂದು ವಚನವೂ ಆಕೆ ಜೀವನದಲ್ಲಿ ಎದುರಿಸಿದ ಪರೀಕ್ಷೆಗಳನ್ನು, ತೋರಿದ ದಿಟ್ಟತನವನ್ನೂ ಪರಿಚಯ ಮಾಡಿಕೊಡುತ್ತದೆ :

**ಬೆಟ್ಟದ ಮೇಲೊಂದು ಮನೆಯ ಮಾಡಿ**
**ಮೃಗಗಳಿಗಂಜಿದಡೆಂತಯ್ಯಾ?**
**ಸಮುದ್ರದ ತಡಿಯಲೊಂದು ಮನೆಯ ಮಾಡಿ**
**ನೊರೆತರೆಗಳಿಗಂಜಿದಡೆಂತಯ್ಯಾ?**
**ಸಂತೆಯೊಳಗೊಂದು ಮನೆಯ ಮಾಡಿ**
**ಶಬ್ದಕ್ಕೆ ನಾಚಿದಡೆಂತಯ್ಯಾ?**
**ಚನ್ನಮಲ್ಲಿಕಾರ್ಜುನ ದೇವ ಕೇಳಯ್ಯ.**
**ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದಡೆ**
**ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.**

ಈ ವಚನ ಯುವಜನತೆಗೆ ಮಾರ್ಗದರ್ಶನ ನೀಡಿದಂತಿದೆ. ಈ ಬದುಕು ಅತ್ಯಂತ ಸಂಘರ್ಷಮಯವಾದದ್ದು. ಸಮಾಜ ಒಡ್ಡುವ ಪರೀಕ್ಷೆಗೆ ಹೆದರಿ ಹಿಮ್ಮೆಟ್ಟಬಾರದು. ಎಲ್ಲವನ್ನೂ ಸಮನಾಗಿಯೇ ಸ್ವೀಕರಿಸಿ ಇದೇ ಸಮಾಜದ ಮಧ್ಯೆ ಜೀವನ ಮಾಡಬೇಕು. ಈ ವಚನ ಜೀವನವನ್ನು ಹೇಗೆ ಎದುರಿಸಬೇಕು ಎಂಬುದನ್ನು ತಿಳಿಸುತ್ತದೆ, ಮಾರ್ಗದರ್ಶನವನ್ನು ನೀಡುತ್ತದೆ. ದಿನ ಬೆಳಗಾದರೆ ಎದುರಾಗುವ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಿದ್ದೇ ಆದರೆ ಬದುಕು ಬಂಗಾರವಾಗುತ್ತದೆ ಎಂಬ ಸಂದೇಶವೂ ಇದೆ.

ಅಕ್ಕಮಹಾದೇವಿ ಮತ್ತೊಂದು ವಚನದಲ್ಲಿ ಯುವ ಜನತೆಯನ್ನು ಕುರಿತೇ ಹೇಳಿದ್ದಂತಿದೆ. ಹೆಜ್ಜೆ ಹೆಜ್ಜೆಗೂ ಎದುರಾಗುವ ಸಮಸ್ಯೆಗಳಿಗೆ ಹೆದರದೆ ಧೈರ್ಯವಾಗಿ ಹೇಗೆ ಪರಿಹರಿಸಿಕೊಳ್ಳಬೇಕು ಎಂಬುದನ್ನು ತನ್ನ ಮಾತೃಹೃದಯದಿಂದ ಸಾಂತ್ವನ ನೀಡಿದ್ದಾಳೆ.

**ಹೆದರದಿರು ಮನವೆ, ಬೆದರದಿರು ತನುವೆ**
**ನಿಜವನರಿತು ನಿಶ್ಚಿಂತನಾಗಿರು**
**ಫಲವಾದ ಮರನ ಕಲ್ಲಲಿ ಇಡುವುದೊಂದು ಕೋಟಿ**

**ಎಲವದ ಮರನ ಇಡುವರೊಬ್ಬರ ಕಾಣೆ,**
**ಭಕ್ತಿಯುಳ್ಳವರ ಬೈವರೊಂದು ಕೋಟಿ**
**ಭಕ್ತಿಯಿಲ್ಲದವರ ಬೈವರೊಬ್ಬರನು ಕಾಣೆ.**

ಅಕ್ಕನ ಒಂದೊಂದು ನುಡಿಯೂ ಯುವಶಕ್ತಿಗೆ ಚೈತನ್ಯವನ್ನು ನೀಡುತ್ತದೆ. ಆಯ್ದಕ್ಕಿ ಲಕ್ಕಮ್ಮನ ಆದರ್ಶ ಜೀವನ ಇಂದಿನ ಯುವ ಜನಾಂಗ ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಲು ಬೇಕಾದ ಮಾನಸಿಕ ಸಿದ್ಧತೆಗೆ ಭೂಮಿಕೆಯನ್ನು ಮಾರ್ಗದರ್ಶನ ಹಾಗೂ ಸ್ಫೂರ್ತಿಯನ್ನು ನೀಡುತ್ತದೆ. ಆಕೆ ತನ್ನ ಗಂಡ ಒಮ್ಮೆ ಅಗತ್ಯಕ್ಕಿಂತ ಹೆಚ್ಚು ಅಕ್ಕಿಯನ್ನು ಸಂಗ್ರಹ ಮಾಡಿಕೊಂಡು ಬಂದುದನ್ನು ಕಂಡು ಕಟುವಾಗಿ ಟೀಕಿಸುವುದರ ಮೂಲಕ ಆತನ ತಪ್ಪನ್ನು ತಿದ್ದಿದ ಮಹಾ ಸಾಧ್ವಿ, ದಿಟ್ಟ ಶರಣೆ. ಆಕೆ ತನ್ನ ಗಂಡನಿಗೆ "**ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ**" ಎಂದು ಹೇಳುತ್ತಾಳೆ. 'ಬಡತನ ಬಡತನ ಎಂದು ನರಳುತ್ತಿರುವವರಿಗೆ ಆ ತಾಯಿ ನೀಡಿದ ಧೈರ್ಯ ಅನುಪಮವಾದುದು.

**ಮನಶುದ್ಧವಿಲ್ಲದವನಿಗೆ ದ್ರವ್ಯದ ಬಡತನವಲ್ಲದೆ**
**ಚಿತ್ತ ಶುದ್ಧದಲ್ಲಿ ಕಾಯಕ ಮಾಡುವ ಸದ್ಭಕ್ತಂಗೆ**
**ಎತ್ತನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು.**

ಆ ತಾಯಿಯ ಆತ್ಮವಿಶ್ವಾಸ ಅಪ್ರತಿಮವಾದುದು. ಇತರರಿಗೆ ಅನುಕರಣೀಯವಾದುದು.

ಅಂತೆಯೇ ಸತ್ಯಕ್ಕ ಒಬ್ಬ ಸಾಮಾನ್ಯ ಹೆಣ್ಣು. ಆಕೆಯ ಹೆಸರೇ ಸೂಚಿಸುವಂತೆ ಸತ್ಯವನ್ನು ಎತ್ತಿ ಹೇಳುವಲ್ಲಿ ಕೋಲ್ಮಿಂಚಾಗಿ ಕಂಡವಳು. ತಾನು ನಂಬಿದ ಸತ್ಯವನ್ನು ಆಚರಿಸಿ ಅದರಂತೆ ನುಡಿದು ಆದರ್ಶಪ್ರಾಯಳಾಗಿದ್ದಾಳೆ. ಧರ್ಮದ ಹೆಸರಿನಲ್ಲಿ ನಡೆದು ಬಂದ ಆಡಂಬರವನ್ನು ಟೀಕಿಸುತ್ತಾ:

**ಅರ್ಚನೆ ಪೂಜನೆ ನೇಮವಲ್ಲ;**
**ಮಂತ್ರ ತಂತ್ರ ನೇಮವಲ್ಲ;**
**ಧೂಪ ದೀಪಾರತಿ ನೇಮವಲ್ಲ;**
**ಪರಧನ ಪರಸ್ತ್ರೀ ಪರದೈವಂಗಳಿಗೆರಗದಿಪ್ಪದೇ ನೇಮ**
**ಶಂಭು ಜಕ್ಕೇಶ್ವರನಲ್ಲಿ ಇದು ಕಾಣಿರಣ್ಣಾ ನಿತ್ಯನೇಮ.**

ಎಂದು ನುಡಿದ ಸತ್ಯಕ್ಕ, ಇಡೀ ಮಾನವ ಸಮುದಾಯಕ್ಕೆ ಕಳಶ ಪ್ರಾಯಳಾಗಿದ್ದಾಳೆ. ಕಸ ಗುಡಿಸುವ ಕಾಯಕ ಮಾಡಿಕೊಂಡಿದ್ದ ಆಕೆ ಕಸ ಗುಡಿಸುವಾಗ ಹಾದಿಯಲ್ಲಿ ಏನೋ ಬೆಲೆಬಾಳುವ ವಸ್ತು ಬಿದ್ದಿದೆ. ಅದು ಆಕೆಯ ಶರಣ ಜೀವನಕ್ಕೇ ಸವಾಲೊಡ್ಡಿದೆ. ಅದನ್ನು ತೆಗೆದುಕೊಳ್ಳಬೇಕೋ, ಬೇಡವೋ ಎಂಬ ಡೋಲಾಯಮಾನ ಸ್ಥಿತಿಯಲ್ಲಿ ಆಕೆ ಸತ್ಯಕ್ಕೆ, ಪ್ರಾಮಾಣಿಕತೆಗೆ ಒತ್ತುಕೊಡುತ್ತಾಳೆ. ಆಗ ಸತ್ಯಕ್ಕನ ಮನಸ್ಸು ಸ್ಥಿರವಾಗುತ್ತಿದೆ. ಆಗ ಅವಳು:

**ಲಂಚವಂಚನೆಗೆ ಕೈಯಾನದ ಭಾಷೆ**
**ಬಟ್ಟೆ ಹೊನ್ನು ವಸ್ತ್ರ ಬಿದ್ದಿದ್ದಡೆ**
**ಕೈಮುಟ್ಟಿ ಎತ್ತಿದೆನಾದಡೇ ಅಯ್ಯಾ ನಿಮ್ಮಾಣೆ**
**ನೀವಿಕ್ಕಿದ ಭಿಕ್ಷೆಯೊಳಗಿಪ್ಪೆನಯ್ಯಾ**
**ಶಂಭುಜಕ್ಕೇಶ್ವರ ದೇವಯ್ಯಾ ನಿಮ್ಮಾಣೆ**

ಎಂದು ಹೇಳುತ್ತಾಳೆ.

ಶಿವಶರಣರು ಪ್ರಾಮಾಣಿಕರಾಗಿ, ಬೇರೊಬ್ಬರಿಗೆ ಭಾರವಾಗದಂತೆ ಬದುಕಿದವರು. ಅವರ ರಕ್ತ ಕಣಗಳಲ್ಲಿ ಪ್ರಾಮಾಣಿಕತೆ, ಶ್ರದ್ಧೆ, ಕಾಯಕ ನಿಷ್ಠೆ ಅಂತರ್ಗತವಾಗಿತ್ತು.

"ಒಮ್ಮೆ ಶರಣ ಮೋಳಿಗೆ ಮಾರಯ್ಯನ ಮನೆಗೆ ಬಸವಣ್ಣನವರು ಬರುತ್ತಾರೆ. ಮಾರಯ್ಯ ಬಡವ. ಏನಾದರೂ ಸಹಾಯವಿರಲೆಂದು ಕೈಯಲ್ಲಿ ಒಂದಿಷ್ಟು ಹೊನ್ನಿದ್ದ ಚೀಲ ತಂದಿರುತ್ತಾನೆ. ಆಗ ಮನೆಯಲ್ಲಿ ಮಾರಯ್ಯ ಇರುವುದಿಲ್ಲ. ಆತನ ಮಡದಿ ಮಹಾದೇವಿ ಬಸವಣ್ಣನವರನ್ನು ಹಿಗ್ಗಿನಿಂದ ಬರಮಾಡಿಕೊಂಡು ಪೂಜೆ-ಪ್ರಸಾದಕ್ಕೆ ವ್ಯವಸ್ಥೆ ಮಾಡುತ್ತಾಳೆ. ಬಸವಣ್ಣನವರು ಪೂಜೆಗೆ ಕುಳಿತಿದ್ದ ಸ್ಥಳದಲ್ಲಿ ತಾವು ತಂದಿದ್ದ ಹೊನ್ನಿನ ಚೀಲ ಇಟ್ಟು ಹೋಗುತ್ತಾರೆ. ಇದು ಮಹಾದೇವಿಗೆ ತಿಳಿಯದು.

ಸ್ವಲ್ಪ ಸಮಯದ ನಂತರ ಮಾರಯ್ಯ ಮನೆಗೆ ಬರುತ್ತಾನೆ. ಅವನ ಹೆಂಡತಿ ತಮ್ಮ ಮನೆಗೆ ಬಸವಣ್ಣನವರು ಬಂದು ಹೋದ ವಿಷಯ ತಿಳಿಸುತ್ತಾಳೆ. ತನ್ನಂತಹ ಬಡಭಕ್ತನ ಮನೆಗೆ ಬಸವಣ್ಣನವರು ಬಂದು ಹೋದರೆಂಬುದು ಸಹಜವಾಗಿಯೇ ಮಾರಯ್ಯನಿಗೆ ಹರ್ಷವುಂಟುಮಾಡುತ್ತದೆ. ಮನೆಯ ಒಳಗೆ ಬಂದಾಗ ಬಸವಣ್ಣನವರು ಇಟ್ಟುಹೋಗಿದ್ದ ಹಣದ ಚೀಲ ಕಣ್ಣಿಗೆ ಬೀಳುತ್ತದೆ, ಅದನ್ನು ಕಂಡು ಮಾರಯ್ಯನಿಗೆ ಅಸಮಾಧಾನ ವುಂಟಾಗುತ್ತದೆ. ಬಸವಣ್ಣನವರ ಬಗೆಗೆ ಕೋಪವೂ ಉಂಟಾಗುತ್ತದೆ. ಆಗ ಹೆಂಡತಿಯನ್ನು ಕುರಿತು:

**"ರೊಕ್ಕ ಹೆಚ್ಚಿತೆ ಸೊಕ್ಕ ಬಂದಿತೆ ಬಸವಗೆ**
**ಇಕ್ಕಿ ಹೋದನೆ ಅವನು ಎನ್ನ ಮನೆಯೊಳಗೆ**
**ಹೆಚ್ಚು ಎಂದರೆ ಕಿಚ್ಚು ಹಚ್ಚಲಾರದೆ?**
**ತೆಗೆದು ಬೀಸಾಡಲಾ ಮಡದಿ**" ಎನ್ನುತ್ತಾನೆ.

ಪತಿಗೆ ತಕ್ಕ ಪತ್ನಿ ಮಹಾದೇವಿ. ಮರುಮಾತಾಡದೆ ಆ ಹೊನ್ನಿನ ಚೀಲವನ್ನು ಹೊರಗೆಸೆದು ಬಿಡುತ್ತಾಳೆ. ಅಷ್ಟಕ್ಕೇ ಬಿಡಲಿಲ್ಲ ಮಾರಯ್ಯ. ಬಸವಣ್ಣನ ಹೊನ್ನಿನ ಚೀಲ ಇಟ್ಟು ಹೋಗಿದ್ದ ಸ್ಥಳವನ್ನು ಬೆರಳು ಮಾಡಿ ತೋರಿಸಿ "ಮಲವು ತಾಗಿದೆ, ನೆಲವ ಸಾರಿಸು ಎನ್ನುತ್ತಾನೆ. ಆಗ ಆಕೆ ಗಂಡನ ಮಾತಿನಂತೆ ನೆಲ ಸಾರಿಸುತ್ತಾಳೆ. ಇದು ಶರಣರ ಅಭಿಮಾನ. ಅವರು ಯಾರ





ದಯೆ-ದಾಕ್ಷಿಣ್ಯಗಳಲ್ಲೂ ಇರಬಯಸುವುದಿಲ್ಲ. ತಾವೇ ಬೆವರು ಹರಿಸಿ ದುಡಿದು ಉಣ್ಣಬೇಕೆಂಬುದು ಅವರ ಜೀವನ ಸಿದ್ಧಾಂತ. ದುಡಿಮೆಯೇ ಅವರಿಗೆ ದೇವರಾಗಿತ್ತು, ಧರ್ಮವಾಗಿತ್ತು. ಪ್ರಸ್ತುತ ಪರಿಸ್ಥಿತಿಯಲ್ಲಿ ಆರೋಗ್ಯವಂತ ಸಮಾಜದ ನಿರ್ಮಾಣಕ್ಕೆ ಅಭಿಮಾನ, ಕಾಯಕ ನಿಷ್ಠೆ, ಶ್ರದ್ಧೆ, ಶುದ್ಧ ಹಸ್ತ, ಶುದ್ಧ ಮನಸ್ಸು ಅಡಿಗಲ್ಲುಗಳಾಗಬೇಕು."

ಇವತ್ತಿನ ಚಳುವಳಿಗಳು ಹೇಗಿವೆಯೆಂದರೆ ಕುರುಡನೊಬ್ಬ ಲ್ಯಾಟೀನ (ದೀಪ) ಹಿಡಿದಂತಿದೆ. "ಹಿಂದಿನ ಕಾಲದಲ್ಲಿ ಒಬ್ಬ ಸಂತ ಇದ್ದ. ಅವನ ಹತ್ತಿರ ಒಬ್ಬ ಕುರುಡ ಬಂದು, "ಸಂತರೆ, ನನಗೊಂದು ಲ್ಯಾಟೀನ ಕೊಡಿ" ಎಂದು ಕೇಳಿದ. ಆಗ ಸಂತ "ಏಕೆ?" ಎಂದು ಪ್ರಶ್ನೆ ಮಾಡಿದ. ಆಗ ಕುರುಡ "ಜನ ಸರಿಯಾಗಿ ನನ್ನನ್ನು ನೋಡಲೆಂದು. ಇಲ್ಲವಾದರೆ ನನ್ನ ಮೇಲೇ ಬೀಳುವ ಸಂಭವ ಹೆಚ್ಚು" ಎಂದು ಹೇಳಿದ. ಸಂತ ಮರುಮಾತಾಡದೆ ಕುರುಡನಿಗೆ ಲ್ಯಾಟೀನ ಕೊಟ್ಟ. ಅವನಿಗೆ ಬಹಳ ಸಂತೋಷವಾಯಿತು. ಅದನ್ನು ಕೈಯಲ್ಲಿ ಹಿಡಿದು ಕೊಂಡು ಹೊರಟ. ನಾಲ್ಕು ಹೆಜ್ಜೆ ಹೊರಟಿರಲಿಲ್ಲ. ಒಬ್ಬ ಬಂದು ಮೈಮೇಲೆ ಬಿದ್ದ. ಆಗ ಕುರುಡನಿಗೆ ಕೋಪ ಬಂದಿತು. "ಕಾಣಿಸೋದಿಲ್ಲವೆ? ನಿನ್ನಂಥವರಿಗಾಗಿಯೇ ಈ ಲ್ಯಾಟೀನ ಹಿಡಿದು ಹೊರಟಿದುದು. ಅದರೂ ಕಾಣಲಿಲ್ಲವೆ?" ಎಂದು ಕೇಳಿದ. ಆಗ ವ್ಯಕ್ತಿ "ನಿನ್ನ ಲ್ಯಾಟೀನ್ ಚೆನ್ನಾಗಿದೆ. ಆದರೇನು ಅದರೊಳಗೆ ದೀಪವಿಲ್ಲವಲ್ಲ" ಎಂದು ಹೇಳಿದ.

ಆಗ ಕುರುಡ "ಓ! ಹೀಗೋ. ನಾನು ದೀಪ ಹಚ್ಚುವುದನ್ನೇ ಮರೆತೆ" ಎಂದು ಹೇಳಿ ಮತ್ತೆ ಹೊತ್ತಿಸಿಕೊಂಡು ಹೊರಟ. ನಾಲ್ಕು ಹೆಜ್ಜೆ ಹೋಗಿರಬೇಕು ಮತ್ತೊಬ್ಬ ಮೈಮೇಲೆ ಬಂದು ಬಿದ್ದ. ಅವನಿಗೆ ಆಶ್ಚರ್ಯವಾಯಿತು. "ದೀಪ ಆರಿದೆಯೇ ಅಥವಾ ನಿನಗೆ ಕಾಣಲಿಲ್ಲವೋ?" ಎಂದು ಕೇಳಿದ ಕುರುಡ. ಆಗ ಆ ವ್ಯಕ್ತಿ "ಏನು ಮಾಡುವುದು ಹೇಳು? ಕಣ್ಣೇನೋ ಇದೆ. ನಿನ್ನ ಲಾಂದ್ರವೂ ಉರಿಯುತ್ತಿದೆ. ಆದರೆ ಆ ಕ್ಷಣ ನಾನು ಕಣ್ಣು ಮುಚ್ಚಿದ್ದೆ. ಇದ್ದವರು ಕಣ್ಣು ಮುಚ್ಚಿದ್ದಾರೆ.. ಯಾರು ಕಣ್ಣು ತೆರೆದಿದ್ದಾರೆ ಅವರಿಗೆ ದೀಪ ಇಲ್ಲ. ನಿನಗೆ ದೀಪ ಇದೆ, ಕಣ್ಣಿಲ್ಲ. ಏನು ವಿಚಿತ್ರ ಜೀವನ. ದೀಪ ಉರಿಯಬೇಕು, ಕಣ್ಣು ತೆರೆದಿರಬೇಕು. ಆಗ ಯಾರೂ ಮೈಮೇಲೆ ಬಂದು ಬೀಳುವುದಿಲ್ಲ. ಸುರಕ್ಷತೆ ಇರುತ್ತದೆ."

ಇವತ್ತಿನ ಬಹುತೇಕ ಚಳುವಳಿಗಳು ಮಾರ್ಗಸೂಚಿ ಇಲ್ಲದೆ, ಮಾರ್ಗದರ್ಶನವಿಲ್ಲದೆ, ನಿಶ್ಚಿತ ಗುರಿಯಿಲ್ಲದೆ ನಡೆಯುತ್ತಿವೆ.

ಯುವಶಕ್ತಿ, ಭೋರ್ಗರೆಯುವ ಉತ್ಸಾಹದ, ಉನ್ಮಾದದ ವಿಶಿಷ್ಟ ಶಕ್ತಿಯಾದರೂ ಕಾಲಚಕ್ರದಲ್ಲಿ ಅದು ತನ್ನ ಅಂತಃಸ್ಸತ್ವವನ್ನು ಕಡಿಮೆ ಮಾಡುತ್ತಾ ಹೋಗುತ್ತದೆ. ಯುವ ಚೇತನ ಬದುಕಿನ ಒಂದು ಪರ್ವಕಾಲ. ಯುವಕರು ತಮ್ಮಲ್ಲಿರುವ ಅದ್ಭುತ ಶಕ್ತಿಯನ್ನು ಸದ್ಬಳಕೆ ಮಾಡಿಕೊಂಡಾಗ ತಮಗೂ ಒಂದು ಅರ್ಥ ಬರುತ್ತದೆ. ಸಮಾಜಕ್ಕೂ ಒಂದು ಬೆಲೆ ಬರುತ್ತದೆ. ಜೀವನವನ್ನು ಕುರಿತು ದಾರ್ಶನಿಕ ಕವಿ ಡಾ. ಸಿದ್ಧಯ್ಯ ಪುರಾಣಿಕರು :

**ಬಾಲ್ಯ ಹಣ್ಣು ಹಣ್ಣು ಎಂದಿತು**
**ಯೌವನ ಹೆಣ್ಣು ಹೆಣ್ಣು ಎಂದಿತು**
**ವಾರ್ಧಕ್ಯ ಹೊನ್ನು ಹೊನ್ನು ಎಂದಿತು**
**ಮುಪ್ಪು ಮಣ್ಣು ಮಣ್ಣು ಎಂದಿತು**
**ಇದುವರೆಗೆ ನೀ ತುಳಿದೆ ಮಣ್ಣನು ಅದು**
**ಇನ್ನೇನು ತುಳಿಯಲಿಹುದು ನಿನ್ನನು.**

ಇಷ್ಟರಲ್ಲಿಯೇ ನಮ್ಮ ಜೀವನ ಮುಗಿದು ಹೋಗ ಬಾರದು. ತಮಗೆ ಲಭ್ಯವಿರುವ ಅವಕಾಶವನ್ನು ಅರ್ಥಪೂರ್ಣ ವಾಗಿ ದುಡಿಸಿಕೊಂಡರೆ ವ್ಯಕ್ತಿತ್ವಕ್ಕೂ ಬೆಲೆ ಬರುತ್ತದೆ, ಸಮಾಜಕ್ಕೂ ಉಪಕಾರ ಮಾಡಿದಂತಾಗುತ್ತದೆ. ಮನುಷ್ಯನಿಗೆ ಯಾವುದೂ ಶಾಶ್ವತವಲ್ಲ. ಇರುವ ಕಾಲವನ್ನು ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬೇಕು. ಈ ಸಂದರ್ಭದಲ್ಲಿ ಒಂದು ದೃಷ್ಟಾಂತ ಕತೆಯನ್ನು ಉಲ್ಲೇಖಿಸಬಹುದು.

"ಬಹಳ ಹಿಂದೆ ಯುರೋಪ್ ದೇಶದಲ್ಲಿ ಒಬ್ಬ ದೊಡ್ಡ ಪ್ರಭಾವಿ ವ್ಯಕ್ತಿ ಇದ್ದ. ಅವನು ದೇಶದಲ್ಲಿ ಸಮಾಜಕ್ಕೆ ಉಪಯೋಗವಾಗುವಂತಹ ಹಲವಾರು ಸುಧಾರಣೆಗಳನ್ನು ಮಾಡಿದ. ಜನ ಆತನನ್ನು ಕೊಂಡಾಡಿದರು. ಅವರೆಲ್ಲರೂ ಒಂದೆಡೆ ಸೇರಿ ಆ ವ್ಯಕ್ತಿಯ ಒಂದು ದೊಡ್ಡ ಪ್ರತಿಮೆಯನ್ನು ಮಾಡಿಸಿ ಸ್ಥಾಪಿಸಬೇಕೆಂದು ನಿರ್ಣಯ ತೆಗೆದುಕೊಂಡರು. ಹಾಸುಗಲ್ಲಿನೊಳಗೆ ೧೦-೧೫ ಅಡಿ ಎತ್ತರದ ಮೂರ್ತಿಯನ್ನು ಕೆತ್ತಿಸಿದರು. ಅದು ಅದ್ಭುತ ಮೂರ್ತಿ. ಅದನ್ನು ನಿಲ್ಲಿಸುವ ದಿನ ಬಂತು. ಆ ವ್ಯಕ್ತಿಗೆ ಬಹಳ ಸಂತೋಷವಾಗಿತ್ತು. ತನ್ನ ಮೂರ್ತಿ ಊರ ಮಧ್ಯದ ಕೂಟಸ್ಥಾನದೊಳಗೆ ಶಾಶ್ವತವಾಗಿ ನಿಲ್ಲುತ್ತದೆ. ಹೋಗುವ ಬರುವ ಪ್ರತಿಯೊಬ್ಬರೂ ತಮ್ಮ ಹ್ಯಾಟನ್ನು ತೆಗೆದು ವಂದನೆಗಳನ್ನು ಸಲ್ಲಿಸುವ ಕ್ಷಣಗಳನ್ನು ನೆನೆಸಿಕೊಂಡು ಸಂತೋಷಪಟ್ಟ. ರಾತ್ರಿ ೧೦-೧೧ ಗಂಟೆಯಾಗಿತ್ತು. ಬೆಳ್ಳನೆ ಬೆಳದಿಂಗಳು ಹರಡಿತ್ತು. ಆ ಮೂರ್ತಿಯನ್ನೊಮ್ಮೆ ನೋಡಿ ಆನಂದಿಸಬೇಕೆನಿಸಿತು. ಎದ್ದು ಹೊರಟ. ಮೂರ್ತಿಯ ಸಮೀಪಕ್ಕೆ ಹೋದ. ಎತ್ತರವಾದ ಮೂರ್ತಿ. ಆತ ಒಂದೊಂದೆ ಮೆಟ್ಟಿಲು ಏರಿ ಮೂರ್ತಿಯ ಕಾಲಿನ ಹತ್ತಿರ ನಿಂತ. ಬಹಳ ಸುಂದರವಾದ ಮೂರ್ತಿ.

 

ಸಂತೋಷದಿಂದ ಕಟ್ಟೆಯ ಮೇಲೆ ಕುಳಿತ. ಕೆಳಗಿನ ಪಾವಟಿಗೆಯ ಮೇಲೆ ಕಾಲಿಟ್ಟಿದ್ದ. ಎಲ್ಲಿಂದಲೋ ಧ್ವನಿ ಕೇಳಿ ಬಂತು. ಆತ ಯಾರಾದರೂ ಇದ್ದಾರೇನೋ ಎಂದು ಸುತ್ತಲೂ ನೋಡಿದ. ಯಾರೂ ಕಾಣಲಿಲ್ಲ. ಮತ್ತೆ ನಗುವ ಧ್ವನಿ. ತನ್ನ ಕಾಲಕೆಳಗೆ ನಕ್ಕಂತಾಯಿತು. ಏನು? ಯಾರು? ಎಂದು ಕೇಳಿದ. ಕಾಲ ಕೆಳಗೆ ಒಂದು ದೊಡ್ಡ ಕಲ್ಲು ಹಾಕಿದ್ದರು. ಆ ಕಲ್ಲು ಹೇಳಿತು. "ನಾನೇ ನಗುವವ ಇಲ್ಲಿದ್ದೇನೆ. ನಾನು ಮೊದಲು ಹೀಗೇ ಇದ್ದೆ. ಇದೇ ಸ್ಥಾನದಲ್ಲೇ, ಹೀಗೇ ನಿಲ್ಲಿಸಿದ್ದರು. ನನ್ನನ್ನು ನಿನ್ನೆ ತೆಗೆದು ಇಲ್ಲಿ ಹಾಕಿ ಪಾವಟಿಗೆ ಕಟ್ಟಿದ್ದಾರೆ. ಅದಕ್ಕಿಂತ ಕೆಳಗಿನ ಪಾವಟಿಗೆಯಲ್ಲಿ ಮತ್ತೊಬ್ಬನನ್ನು ಹಾಕಿದ್ದಾರೆ. ಇಂದು ನಿನ್ನ ಸರತಿ. ಹಿಂದೆ ನಾನು ನಿನ್ನಂತೆ ಬಂದು ಇಲ್ಲಿ ಕೂತು ಸಂತೋಷ ಪಡುತ್ತಿದ್ದೆ. ಅಷ್ಟರಲ್ಲಿ ಕೆಳಗಿನ ಕಲ್ಲು ನಕ್ಕಿತು. ನನಗೆ ಬುದ್ಧಿ ಬಂತು. ನೆನಪಾಗಿ ನಕ್ಕೆ. ನೀನು ನಾಳೆ ಏನು ಆಗುತ್ತೀಯೋ, ಅದನ್ನು ಕಲ್ಪಿಸಿಕೊಂಡು ನಕ್ಕೆ". ಎಂದು ಹೇಳಿತು. ಇದು ಎಲ್ಲರ ಕಥೆಯೂ ಕೂಡ.

ವಚನ ಚಳುವಳಿ ದಲಿತರಿಗೆ ಸ್ಫೂರ್ತಿಯನ್ನು ನೀಡಿತು. ಜಾತಿರಹಿತ ಸಮಾಜದ ನೆಲೆಯಲ್ಲಿ ಕಟ್ಟಬೇಕು ಎಂಬ ಮನೋಭಾವ ಅವರಲ್ಲಿ ಬೇರೂರುವಂತೆ ಮಾಡಿತು. ಭ್ರಷ್ಟಾಚಾರ, ದಬ್ಬಾಳಿಕೆ, ಅನ್ಯಾಯಗಳ ವಿರುದ್ಧ ಹೋರಾಟ ನಡೆಸುವ ಅಂತಃಸ್ಸತ್ವ ಅವರಲ್ಲಿ ಬೇರೂರಿ, ವಿರೋಧಿಸುವ ನೈತಿಕ ಸ್ಥೈರ್ಯ ಮೂಡುವಂತಾಯಿತು. ಪ್ರಸ್ತುತ ಸಮಾಜದಲ್ಲಿ ಇಂತಹವುಗಳ ವಿರುದ್ಧ ಯುವಜನತೆ ಸಿಡಿದು ಬೀಳುವ ಪ್ರವೃತ್ತಿ ಬೆಳೆಯುತ್ತಿರುವುದಕ್ಕೆ ಮೂಲ ಪ್ರೇರಣೆ ನೀಡಿದುದು ಶರಣ ಚಳುವಳಿ.

ನಮ್ಮ ಜನಪದರಲ್ಲಿಯೂ ಪ್ರತಿಭಟನೆಯ ಕಿಚ್ಚನ್ನು ಕಾಣಬಹುದು.

**'ದೇವರಿಗೆ ಹೋಗಬೇಕು ದಾರಿಬಿಡು ಪೂಜಾರಿ**
**ದೇವರಿಗೂ ನನಗೂ ಒಳಮಾತು'** ಎಂದು ಕೇಳುವ, ಪ್ರಶ್ನಿಸುವ ರೀತಿ ಮೆಚ್ಚುವಂತಹುದು. ದೇವರು ಮತ್ತು ಭಕ್ತರ ನಡುವೆ ಪೂಜಾರಿ ಎಂಬ ಮಧ್ಯವರ್ತಿಯ ಅಗತ್ಯವಾದರೂ ಏಕೆ? ಎಂದು ಹೇಳುವ ಎದೆಗಾರಿಕೆ ಅದ್ಭುತವಾದುದು. ಶರಣ ಚಳುವಳಿ ಒಂದು ಸಮುದಾಯದ ಎದುರು ನಿಂತುಕೊಂಡು ಯಾವುದೇ ವ್ಯಕ್ತಿ ತನ್ನ ವ್ಯಕ್ತಿತ್ವವನ್ನು ಅರಳಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಿತು.

ಶರಣ ಚಳುವಳಿ ಇಂದಿಗೂ ಏಕೆ ಪ್ರಸ್ತುತವಾಗಿದೆ ಎಂದರೆ, ಶರಣರು ಜನಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ತಮ್ಮ ಭಾವನೆಗಳನ್ನು ಹಂಚಿಕೊಂಡಿದುದು. ಜೊತೆಗೆ ನಡೆ-ನುಡಿ, ಆಚಾರ-ವಿಚಾರ, ಹೊಸತನ ಇವುಗಳು ಅಂತಹ ಸ್ಫೂರ್ತಿಯನ್ನು ನೀಡಲು ವಚನ ಚಳುವಳಿ ಕಾರಣವಾಯಿತು. ಶರಣರ ವಿಚಾರಧಾರೆ ಕ್ರಾಂತಿಕಾರಕವಾಗಿದ್ದರೂ ಕೂಡ ಸಮಾಜದ ಹಿತದೃಷ್ಟಿಯಿಂದ ಅವು ಉತ್ತಮವಾದುದರಿಂದ ಎಲ್ಲರೂ ಒಪ್ಪಿಕೊಂಡರು; ಅಪ್ಪಿಕೊಂಡರು. ಇಡೀ ಸಮುದಾಯ ಅದರಲ್ಲಿ ಪಾಲುಗೊಂಡು ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ಅಭಿವ್ಯಕ್ತಪಡಿಸುವ ವಾತಾವರಣ ನಿರ್ಮಾಣವಾಗಲು ಪ್ರಭಾವ ಬೀರುವಂತೆ ಮಾಡಿತು.

ಸಮುದಾಯದ ಮೇಲೆ ಒಟ್ಟಿನ ಪರಿಣಾಮ ಬೀರಿ ಅದನ್ನು ಮುಂದುವರಿಸಿಕೊಂಡು ಹೋಗುವಂತಹುದು ನಿಜವಾದ ಚಳುವಳಿಯ ಲಕ್ಷಣ. ಈ ದೃಷ್ಟಿಯಿಂದ ೧೨ನೆಯ ಶತಮಾನದಲ್ಲಿ ನಡೆದ ಶರಣ ಚಳುವಳಿ ಇಂದಿಗೂ ಜೀವಂತಿಕೆಯನ್ನು ಉಳಿಸಿಕೊಂಡಿದೆ. ಈ ಚಳುವಳಿ ಜನಜಾಗೃತಿ ಮೂಡಿಸುವುದರ ಜೊತೆಗೆ ಪರಿಣಾಮಕಾರಿಯಾಗಿ ಪ್ರಭಾವವನ್ನು ಬೀರಿದೆ.

**(ಕೃತಜ್ಞತೆ : ಈ ಲೇಖನವನ್ನು ಸಿದ್ಧಪಡಿಸಲು ಮಾರ್ಗದರ್ಶನ ನೀಡಿದ ಹಿರಿಯ ವಿದ್ವಾಂಸರಾದ ಶ್ರೀ ಎಂ.ಜಿ. ನಾಗರಾಜ್ ಅವರಿಗೆ)**

**ಪೂರಕ ಸಾಹಿತ್ಯ**

೧. ವೀರಶೈವ ಸೂಳ್ನುಡಿಗಳು : ಡಾ. ಜ.ಚ.ನಿ.
೨. ಮಹಾಮನೆ : ಸಂ. ಎಂ.ಜಿ. ನಾಗರಾಜ್, ಎಚ್.ಎಸ್. ಸಿದ್ಧಗಂಗಪ್ಪ
೩. ಭಗವಚ್ಚಿಂತನ : ಶ್ರೀ ಸಿದ್ಧೇಶ್ವರ ಸ್ವಾಮಿಗಳು



**ಗೆಳೆತನ ಮಾಡಿದರೆ ನಮಗಿಂತ ಶ್ರೇಷ್ಠರಾದವರೊಡನೆ ಮಾಡಬೇಕು, ಇಲ್ಲವೆ ಸಮಾನರೊಡನಾದರೂ ಮಾಡಬೇಕು; ಇವೆರಡೂ ಸಾಧ್ಯವಾಗದಿದ್ದಲ್ಲಿ ಏಕಾಕಿಯಾಗಿರುವುದೇ ಲೇಸು.**

**- ಬುದ್ಧ**



 



# ನವೆಂಬರ್ : ಕೃಷಿ ಚಟುವಟಿಕೆಗಳು

- ಡಾ. ಕೆ.ಎನ್. ವೆಂಕಟೇಶಮೂರ್ತಿ
ಕೃಷಿ ಅಧಿಕಾರಿ
ಜಲಾನಯನ ಪ್ರದೇಶಾಭಿವೃದ್ಧಿಯೋಜನೆ
ಉಡುಪಿ-೫೭೬ ೧೦೧

ಹೆಚ್ಚಾದ ಮಳೆಯ ನೀರನ್ನು ಹೊರಹಾಕಲು ಬಸಿಗಾಲುವೆ ತೆಗೆಯಿರಿ. ಇಳಿಜಾರಿಗೆ ಅಡ್ಡಲಾಗಿ ೩೦ ಅಡಿಗೊಂದರಂತೆ ಸಣ್ಣ ಬದುನಿರ್ಮಿಸಿ ಅಥವಾ ಖಸ್, ಲಾವಂಚ ಹುಲ್ಲಿನಿಂದ ಜೈವಿಕ ಬದುಗಳನ್ನಾದರೂ ನಿರ್ಮಿಸಿ. ಈ ರೀತಿ ನಿರ್ಮಿಸಿದ ಎರಡೂ ಬದುಗಳ ಮಧ್ಯೆ ಜಮೀನನ್ನು ಸಮಮಾಡಿ. ಹಿಂಗಾರು ಬಿತ್ತನೆಗೆ ಮೊದಲು ಕೊಟ್ಟಿಗೆ ಗೊಬ್ಬರವನ್ನು ಜಮೀನಿನಲ್ಲಿ ಸಮನಾಗಿ ಎರಚಿ ಮಣ್ಣಿನಲ್ಲಿ ಸೇರಿಸಿ. ಸಮಪಾತಳಿಗೆ ಅನುಗುಣವಾಗಿ ಅಥವಾ ಇಳಿಜಾರಿಗೆ ಅಡ್ಡಲಾಗಿ ಬಿತ್ತನೆ ಕೈಗೊಳ್ಳಿ.

### ಮುಂಗಾರು ಬೆಳೆಗಳು

ಮುಂಗಾರು ಹಂಗಾಮಿನಲ್ಲಿ ಬಿತ್ತನೆಯಾದ ಬೆಳೆಗಳು ಕಟಾವು ಹಂತದಲ್ಲಿವೆ. ಕಟಾವಿಗೆ ಮುಂಚೆ ಹಾಗೂ ಕಟಾವಿನ ನಂತರ ಧಾನ್ಯ ಸಂಗ್ರಹಣೆ ಮಾಡಲು ರೈತಬಾಂಧವರು ಕೆಲವು ಅಂಶಗಳನ್ನು ಪಾಲಿಸಬೇಕಾಗುತ್ತದೆ. ಕುಯಿಲುಮಾಡುವುದು ಇನ್ನೂ ೧೫ ದಿನಗಳಿವೆ ಎನ್ನುವಾಗ ಭತ್ತ, ಜೋಳ, ಮುಸುಕಿನ ಜೋಳ ಮುಂತಾದ ಬೆಳೆಗಳ ಹಾಗೂ ದ್ವಿದಳ ಧಾನ್ಯ ಬೆಳೆಗಳ ಕಾಯಿಗಳ ಮೇಲೆ ಶೇ. ೫ರ ಮೆಲಾಥಿಯಾನ್ ಪುಡಿಯನ್ನು ಧೂಳೀಕರಿಸಬೇಕು. ಧಾನ್ಯಗಳನ್ನು ಶುಚಿಯಾದ ಪ್ರದೇಶಗಳಲ್ಲಿ ಒಕ್ಕಣೆ ಮಾಡಬೇಕು. ಒಕ್ಕಣೆ ಮಾಡಿದ ಧಾನ್ಯವನ್ನು ಶೇ ೧೦ ರಿಂದ ೧೨ರಷ್ಟು ತೇವಾಂಶಕ್ಕೆ ಬರುವವರೆಗೂ ಒಣಗಿಸಬೇಕು. ಸುಡುಬಿಸಿಲಿನಲ್ಲಿ ಧಾನ್ಯಗಳನ್ನು ಒಣಗಿಸಬಾರದು. ಕಾರಣ ಅವು ಮೊಳೆಯುವ ಶಕ್ತಿಯನ್ನು ಕಳೆದುಕೊಳ್ಳುತ್ತವೆ. ಈ ರೀತಿ ಒಣಗಿಸಿದ ಧಾನ್ಯಗಳನ್ನು ಒಂದು ವರ್ಷದವರೆಗೂ ಸಂಗ್ರಹಿಸಿಡಬಹುದು. ಎರಡು ವರ್ಷಗಳಿಗಿಂತಲೂ ಹೆಚ್ಚು ಕಾಲ ಸಂಗ್ರಹಿಸಿಡಬೇಕಾದಲ್ಲಿ ತೇವಾಂಶ ಶೇ. ೮ ಕ್ಕಿಂತಲೂ ಕಡಿಮೆ ಇರಬೇಕು. ತೇವಾಂಶ ಹೆಚ್ಚಾಗಿದ್ದರೆ ಧಾನ್ಯಗಳಿಂದ ಉತ್ಪತ್ತಿಯಾಗುವ ಶಾಖದಿಂದ ಧಾನ್ಯಗಳು ಕೆಡುತ್ತವೆ. ನಿಗದಿತ ಪ್ರಮಾಣಕ್ಕಿಂತಲೂ ಹೆಚ್ಚು ಶಾಖ ಕಂಡುಬಂದರೆ ಅಲ್ಲಿ ಧಾನ್ಯಗಳು ಕೆಡಲು ಪ್ರಾರಂಭವಾಗಿವೆ ಎಂದು ತಿಳಿಯಬೇಕು. ಧಾನ್ಯದಲ್ಲಿ ಹುದುಗಿರುವ ಕೀಟಗಳನ್ನು ಇ.ಡಿ.ಬಿ. ರಾಸಾಯನಿಕ ಧೂಪ ಹಾಕಿ ನಿಯಂತ್ರಿಸಬೇಕು. ಇ.ಡಿ.ಬಿ. ಆಂಪ್ಯೂಲ್‌ಗಳು ೩,೬,೧೦,೧೫ ಮತ್ತು ೩೦ ಮಿಲಿಗಾಜಿನ ಸೀಸೆಗಳಲ್ಲಿ ದೊರೆಯುತ್ತವೆ. ಒಂದು ಕ್ವಿಂಟಾಲ್ ಧಾನ್ಯಕ್ಕೆ ೩ ಮಿಲಿ ಇ.ಡಿ.ಬಿ. ಸಾಕಾಗುತ್ತದೆ. ಧಾನ್ಯಗಳನ್ನು ಸಂಗ್ರಹಿಸಿಡಲು ಡಿ.ಡಿ.ಟಿ, ಬಿ.ಹೆಚ್.ಸಿ ಬೋರಿಕ್ ಪೌಡರ್ ಮುಂತಾದ ರಾಸಾಯನಿಕಗಳನ್ನು ಬಳಸಬಾರದು.

ಕೃಷಿ ಇಲಾಖೆಯು ರೈತರಿಗೆ ಲೋಹದ ಧಾನ್ಯ ಸಂಗ್ರಹಣಾ ಕಣಜಗಳನ್ನು ಶೇ. ೫೦ರ ರಿಯಾಯಿತಿ ದರದಲ್ಲಿ ಪ್ರತಿಫಲಾನುಭವಿಗೆ ಪ್ರತಿಕಣಜಕ್ಕೆ ೫೦೦ರೂ.ಗಳಿಗೆ ಮೀರದಂತೆ ಹಾಗೂ ಉಗ್ರಾಣದಲ್ಲಿ ಬೀಳುವ ಕೀಟಗಳನ್ನು ನಿಯಂತ್ರಿಸಲು ಶೇ. ೫೦ರ ರಿಯಾಯಿತಿ ದರದಲ್ಲಿ ನೀಡುತ್ತದೆ. ರೈತಬಾಂಧವರು ಕೃಷಿ ಇಲಾಖಾಧಿಕಾರಿಗಳನ್ನು ಸಂಪರ್ಕಿಸಿ ಪ್ರಯೋಜನ ಪಡೆದುಕೊಳ್ಳಬಹುದು.

### ಇತರೆ ಸಲಹೆಗಳು

ಭತ್ತ, ರಾಗಿ, ಜೋಳ ಮುಂತಾದ ಬೆಳೆಗಳು ಕುಯ್ಲಾದ ತಕ್ಷಣ ಕೂಳೆಗಳನ್ನೆಲ್ಲಾ ಕಿತ್ತು ನಾಶಪಡಿಸಿ. ಇದರಿಂದ ಕೂಳೆಗಳಲ್ಲಿ ವೃದ್ಧಿಯಾಗಬಹುದಾದ ಕಾಂಡಕೊರೆಯುವ ಹುಳು ಹಾಗೂ ರೋಗಗಳು ಮುಂದಿನ ಬೆಳೆಗೆ ಹರಡುವುದನ್ನು ತಪ್ಪಿಸಬಹುದು.

ಜೋಳದ ಬೆಳೆಯಲ್ಲಿ ಕುಯ್ಲುಮಾಡಿದ ನಂತರ ಉಳಿಯುವ ತೆನೆ ಭಾಗಗಳನ್ನು ಒಟ್ಟು ಮಾಡಿ ಸುಡುವುದರಿಂದ ಅದರಲ್ಲಿ ಅಡಗಿರುವ ಬೆಂಕಿ ಹುಳುಗಳೆಲ್ಲವೂ ನಾಶವಾಗುತ್ತವೆ.

ಭತ್ತದ ಬೆಳೆಯಲ್ಲಿ ಶೇ. ೯೦ರಷ್ಟು ಕಾಳುಗಳು ಮಾಗಿದೊಡನೆ ಕುಯ್ಲು ಮಾಡಿ. ಕುಯ್ಲು ಮಾಡಿದ ತಕ್ಷಣ ಕಾಳನ್ನು ಬೇರ್ಪಡಿಸಿ ಭತ್ತವನ್ನು ಒಣಗಿಸುವಾಗ ಪ್ರತಿಸಾರಿಯೂ ೪-೬ ಗಂಟೆಗಳಿಗೂ ಹೆಚ್ಚಾಗಿ ಒಣಗಿಸಬೇಡಿ. ಇದರಿಂದ ಅಕ್ಕಿನುಚ್ಚಾಗುವುದನ್ನು ಕಡಿಮೆ ಮಾಡಬಹುದು.

### ನೀರಾವರಿ ಜೋಳ

ಮುಂಗಾರಿನಲ್ಲಿ ಬಿತ್ತಿದ ಜೋಳದ ಬೆಳೆಯಿಂದ ನೀರಾವರಿ ಸೌಕರ್ಯವಿದ್ದ ಕಡೆ ಕೂಳೆ ಬೆಳೆ ಸಹಾ ತೆಗೆಯಬಹುದು. ಕೂಳೆ ಬೆಳೆ ಸುಮಾರು ೮೦ ದಿವಸಗಳಲ್ಲಿ ಕೊಯ್ಲಿಗೆ ಬರುತ್ತದೆ.

ಎಲ್ಲಾ ತೆನೆಗಳನ್ನೂ ಒಂದೇ ದಿವಸ ಕುಯ್ಲು ಮಾಡಿ. ಸಾಧ್ಯವಾದಲ್ಲಿ ದಂಟನ್ನೂ ಸಹಾ ಅಂದೇ ಕುಯ್ಯಬಹುದು. ಕುಯ್ದುಕೂಡಲೇ ನೀರು ಹಾಯಿಸಿ. ಇದರಿಂದ ಒಂದೇ ಸಮನಾಗಿ ಚಿಗುರಲು ಸಹಾಯವಾಗುತ್ತದೆ. ಮುಖ್ಯ ಬೆಳೆಯ ಕಟಾವಿನ ೩-೪ ವಾರಗಳ ನಂತರ ರಸಗೊಬ್ಬರಗಳನ್ನು ಕೊಡಿ. ಉತ್ತಮ ನಿರ್ವಹಣೆಯಿಂದ ಎಕರೆಗೆ ೧೫ರಿಂದ ೨೦ ಕ್ವಿಂಟಾಲ್ ಕಾಳು ಮತ್ತು ೨-೩ ಟನ್ ಮೇವನ್ನು ಪಡೆಯಬಹುದು.

**ತೊಗರಿ**

ಕಾಯಿಕೊರಕ ಹುಳುವಿನ ಇರುವಿಕೆಗಾಗಿ ಮೋಹಕ ಬಲೆ (ಫೆರಮೋನ್ ಟ್ರಾಪ್) ಬಳಸಿ. ಮೋಹಕ ಬಲೆಯಲ್ಲಿ ೮-೧೦ ಪತಂಗಗಳು ಬಿದ್ದಲ್ಲಿ ಕೀಟನಾಶಕಗಳನ್ನು ಬಳಸಿ ಎನ್.ಪಿ.ವಿ. ನಂಜುರೋಗದ ಸಿಂಪರಣೆ ಮಾಡಿ ಹತೋಟಿ ಮಾಡಿ.

**ಹಿಂಗಾರು ಬೆಳೆಗಳು**

ಹಿಂಗಾರಿ ಜೋಳ (ನೀರಾವರಿ) ಬಿತ್ತನೆಯಾಗಿ ೪ ವಾರಗಳಾಗಿರುವ ಬೆಳೆಗೆ ಎಕರೆಗೆ ೪೫ ಕೆ.ಜಿ. ಯೂರಿಯಾವನ್ನು ಮೇಲುಗೊಬ್ಬರವಾಗಿ ಕೊಟ್ಟು ನಂತರ ಸಾಲಿನ ೨ ಪಕ್ಕಗಳಿಂದಲೂ ಮಣ್ಣು ಏರು ಹಾಕಿ. ಬಿತ್ತನೆ ಮಾಡಿದ ೩೦ ದಿವಸಗಳವರೆಗೂ ಪಕ್ಕದಲ್ಲಿ ಬರುವ ಮರಿಗಳನ್ನು ಆಗಾಗ್ಗೆ ತೆಗೆಯುತ್ತಿರಿ. ಬಿತ್ತನೆ ಮಾಡಿದ ೨೦ ದಿನಗಳ ನಂತರ ಸುಳಿ ತಿಗಣೆ ಬಾಧೆ ಕಂಡುಬರಬಹುದು. ನಿಯಂತ್ರಣಕ್ಕಾಗಿ ೨೦ ಮಿಲಿ ಎಂಡೋಸಲ್ಫಾನನ್ನು ೧೦ ಲೀ. ನೀರಿನಲ್ಲಿ ಬೆರೆಸಿ ಸಿಂಪಡಿಸಿ. ನುಸಿ ಕೀಟ ಕಂಡುಬಂದಲ್ಲಿ ೨೫ ಮಿಲಿ ಡೈಕೋಫಾಲನ್ನು ೧೦ ಲೀ. ನೀರಿನಲ್ಲಿ ಬೆರೆಸಿ ಸಿಂಪಡಿಸಿ.

**ಶಕ್ತಿಮಾನ್ ಮುಸುಕಿನ ಜೋಳ (ನೀರಾವರಿ)**

ಬಿತ್ತನೆಯಾಗಿ ೩-೪ ವಾರಗಳಾಗಿರುವ ಬೆಳೆಗೆ ೯೦ ಕೆ.ಜಿ ಯೂರಿಯಾವನ್ನು ಕೊಟ್ಟು ಮಣ್ಣು ಏರು ಹಾಕಿ. ಮರಳು ಮಿಶ್ರಿತ ಪ್ರದೇಶಗಳಲ್ಲಿ ಬಿತ್ತನೆಯಾದ ೩-೪ ವಾರಗಳಲ್ಲಿ ೪೫ ಕೆ.ಜಿ ಯೂರಿಯಾವನ್ನು ಒಂದು ಬಾರಿ ಮತ್ತು ೬-೭ ನೇ ವಾರದಲ್ಲಿ ೪೫ ಕೆ.ಜಿ ಯೂರಿಯಾವನ್ನು ಮತ್ತೊಂದು ಬಾರಿ ಕೊಡುವುದು ಒಳ್ಳೆಯದು. ಬುಡದಲ್ಲಿ ಬರುವ ಕವಲುಗಳನ್ನು ಆಗಾಗ್ಗೆ ತೆಗೆಯುತ್ತಿರಿ. ಕಾಂಡ ಕೊರೆಯುವ ಹುಳುವಿನ ಹತೋಟಿಗೆ ೨೦ ಮಿಲಿ ಎಂಡೋಸಲ್ಫಾನನ್ನು ೧೦ ಲೀ. ನೀರಿನಲ್ಲಿ ಬೆರೆಸಿ ಸಿಂಪಡಿಸಿ. ಹೇನಿನ ಬಾಧೆ ಕಂಡು ಬಂದರೆ ಎಕರೆಗೆ ೮ ಕೆ.ಜಿ ಲಿಂಡೇನ್ ಹರಳುಗಳನ್ನು ಸುಳಿಯಲ್ಲಿ ಉದುರಿಸಿ. ಇದರಿಂದ ಕಾಂಡ ಕೊರೆಯುವ ಹುಳುವಿನ ಹಾವಳಿಯೂ ನಿಯಂತ್ರಣಕ್ಕೆ ಬರುತ್ತದೆ. ಎಲೆ ಚುಕ್ಕೆ ರೋಗ, ತುಕ್ಕು ರೋಗ ಮತ್ತು ಬೂಜುರೋಗದ ನಿಯಂತ್ರಣಕ್ಕಾಗಿ ೨೫ ಗ್ರಾಂ ಜೈನೆಬ್ ಅನ್ನು ೧೦ ಲೀ. ನೀರಿನಲ್ಲಿ ಕರಗಿಸಿ ಸಿಂಪಡಿಸಿ.

**ಕಡಲೆ**

ಬಿತ್ತನೆಯನ್ನು ನವೆಂಬರ್ ಎರಡನೇ ವಾರದವರೆಗೆ ಮುಂದುವರಿಸಬಹುದು. ಅಣ್ಣಿಗೇರಿ-೧ ಎಂಬುದು ಉತ್ತಮ ಇಳುವರಿ ಕೊಡುವ ತಳಿ. ಇದು ೧೦೦ ದಿನಗಳಲ್ಲಿ ಕುಯ್ಲಿಗೆ ಬರುತ್ತದೆ. ಇದನ್ನು ನೀರಾವರಿ ಹಾಗೂ ಮಳೆಯಾಶ್ರಯ ಗಳೆರಡರಲ್ಲೂ ಬೆಳೆದುಕೊಳ್ಳಬಹುದು. ಮಳೆಯಾಶ್ರಿತ ಪ್ರದೇಶಗಳಿಗಾದರೆ ಅಣ್ಣಿಗೇರಿ-೧ ಹಾಗೂ ಕೆ.ಜಿ.ಬಿ-೧ (ಭೀಮಾ) ತಳಿಗಳನ್ನು ಆಯ್ಕೆಮಾಡಿಕೊಳ್ಳಬಹುದು. ಇವು ೯೫ ದಿವಸಗಳಲ್ಲಿ ಕುಯ್ಲಿಗೆ ಬರುತ್ತವೆ.

**ಕುಸುಬೆ**

ರಾಜ್ಯದ ದಕ್ಷಿಣ ಜಿಲ್ಲೆಗಳಲ್ಲಿ ಬಿತ್ತನೆಯನ್ನು ನವೆಂಬರ್ ಅಂತ್ಯದವರೆಗೂ ಮುಂದುವರಿಸಬಹುದು. ಅಣ್ಣಿಗೇರಿ-೧ ಮತ್ತು ಎ-೩೦೦ ಅಧಿಕ ಇಳುವರಿ ಕೊಡುವ ತಳಿಗಳು. ಇವು ೧೩೦ ದಿವಸಗಳಲ್ಲಿ ಕುಯಿಲಿಗೆ ಬರುತ್ತವೆ.

**ಸೂರ್ಯಕಾಂತಿ**

ನೀರಾವರಿಯಲ್ಲಿ ನವೆಂಬರ್ ಅಂತ್ಯದವರೆಗೂ ಬಿತ್ತನೆಯನ್ನು ಮುಂದುವರೆಸಬಹುದು.

**ಕಬ್ಬು**

ಅಕ್ಟೋಬರ್ ತಿಂಗಳ ಅಂತ್ಯದವರೆಗೂ ನೆಡಲು ಸೂಕ್ತವಾದ ಕಬ್ಬಿನ ತಳಿಗಳೆಂದರೆ ೧೨ರಿಂದ ೧೬ ತಿಂಗಳಲ್ಲಿ ಕಟಾವಿಗೆ ಬರುವ ಸಿ.ಓ.೪೧೯ ಮತ್ತು ೧೨ ರಿಂದ ೧೪ ತಿಂಗಳಲ್ಲಿ ಕಟಾವಿಗೆ ಬರುವ ಸಿ.ಓ ೭೮೦೪. ಈ ಎರಡೂ ತಳಿಗಳನ್ನು ರಾಜ್ಯದ ಎಲ್ಲಾ ಪ್ರದೇಶಗಳಿಗೂ ಶಿಫಾರಸ್ಸು ಮಾಡಲಾಗಿದೆ. ಸಿ.ಓ ೬೨೧೭೫ ತಳಿಯು ೧೪ ತಿಂಗಳಲ್ಲಿ ಕಟಾವಿಗೆ ಬರುತ್ತದೆ. ಇದ್ನು ಭದ್ರ ಹಾಗೂ ಮಂಡ್ಯ ನಾಲಾ ಪ್ರದೇಶಗಳಲ್ಲಿ ಬೆಳೆದುಕೊಳ್ಳಲು ಶಿಫಾರಸ್ಸು ಮಾಡಲಾಗಿದೆ.

ಕುಯಿಲಿನ ಕಾರ್ಯ ಮುಗಿದ ಮೇಲೆ ಒಂದು ವಾರದೊಳಗಾಗಿ ಗರಿಯನ್ನೆಲ್ಲಾ ತೆಗೆದು ಕಾಂಪೋಸ್ಟ ಮಾಡಬಹುದು. ಇದು ಸಾಧ್ಯವಾಗದಿದ್ದಲ್ಲಿ ಗದ್ದೆಯಿಂದ ಹೊರಹಾಕಿ ಸುಟ್ಟು ಹಾಕಬಹುದು. ಅಥವಾ ಗರಿಯನ್ನೆಲ್ಲಾ ಭೂಮಿಯಲ್ಲಿ ಬಿಟ್ಟು ಸಾಲಿನ ಎರಡೂ ಪಕ್ಕಗಳಿಂದಲೂ ಮಣ್ಣು ಏರು ಹಾಕಬಹುದು. ಇದರಿಂದ ಗರಿಗಳೆಲ್ಲವೂ ಅಲ್ಲೇ ಕೊಳೆಯಲು ಸಹಾಯವಾಗುತ್ತದೆ.





## ಪ್ರಗತಿ ಸಹಕಾರ ಬ್ಯಾಂಕ್‌ನ ಬೆಳ್ಳಿಹಬ್ಬದ ಉದ್ಘಾಟನೆ

# ಪ್ರಾಮಾಣಿಕ ಜೀವನ ನಡೆಸಲು ಶ್ರೀಶ್ರೀಗಳವರ ಕರೆ

"ಜನತೆ ದೈನಂದಿನ ಕರ್ತವ್ಯಗಳಲ್ಲಿ ಪ್ರಾಮಾಣಿಕತೆ ರೂಪಿಸಿಕೊಳ್ಳಬೇಕು. ಶಾಂತಿ, ನೆಮ್ಮದಿ, ಸಹಬಾಳ್ವೆಯ ಆದರ್ಶ ಜೀವನವನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ನಾವಿಂದು ದೇಹ, ಮನಸ್ಸು ಮತ್ತು ಇಂದ್ರಿಯಗಳನ್ನು ಕಾಯಕದ ಕಮ್ಮಟದಲ್ಲಿ ತೊಡಗಿಸಬೇಕಾಗಿದೆ. ದೇವರಿಂದ ದತ್ತವಾದ ಈ ಜೀವನದ ಪ್ರತಿ ನಿಮಿಷವನ್ನು ವ್ಯರ್ಥ ಮಾಡದೆ ಅರ್ಥಪೂರ್ಣವಾದ ಮಣಿಹದಲ್ಲಿ ಮಗ್ನರಾಗುವುದು ಇಂದು ಅಗತ್ಯವಾಗಿದೆ. ಬೇಡಿ ಬಡವರಾಗುವುದಕ್ಕಿಂತ ನೀಡಿ ದೊಡ್ಡವರಾಗುವುದನ್ನು ಬಸವಾದಿ ಶರಣರು ತೋರಿಸಿಕೊಟ್ಟಿದ್ದಾರೆ. ಅವರ ಜೀವನ ಸಂದೇಶವನ್ನು ಅಳವಡಿಸಿಕೊಂಡು ಮುನ್ನಡೆಯಬೇಕು" ಎಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ ತಿಳಿಸಿದರು. ಅವವು ಸೆಪ್ಟೆಂಬರ್ ೩ರಂದು ಬೆಂಗಳೂರಿನಲ್ಲಿ ಸೀತಾ ಸಮುದಾಯ ಭವನದಲ್ಲಿ ಏರ್ಪಡಿಸಿದ್ದ ಪ್ರಗತಿ ಸಹಕಾರ ಬ್ಯಾಂಕ್‌ನ ಬೆಳ್ಳಿಹಬ್ಬ ಸಮಾರಂಭವನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸಿ ಆಶೀರ್ವಚನ ನೀಡಿದರು.

ಉದ್ಘಾಟನಾ ಸಮಾರಂಭಕ್ಕೆ ಮುನ್ನ ಪರಮಪೂಜ್ಯ ಶ್ರೀಶ್ರೀಗಳವರು ಬ್ಯಾಂಕಿಗೆ ಆಗಮಿಸಿದಾಗ ಮಂಗಳವಾದ್ಯ ಹಾಗೂ ವೇದಘೋಷದೊಂದಿಗೆ ಬ್ಯಾಂಕಿನ ಆಡಳಿತವರ್ಗ ಹಾಗೂ ಸಿಬ್ಬಂದಿಯವರು ಬರಮಾಡಿಕೊಂಡರು. ಶ್ರೀಶ್ರೀಗಳವರು ಬ್ಯಾಂಕಿನಲ್ಲಿ ಗಣಕೀಕರಣ ಯಂತ್ರವನ್ನು ಉದ್ಘಾಟಿಸಿ ಬ್ಯಾಂಕಿನ ಆಧುನೀಕರಣಕ್ಕೆ ಚಾಲನೆ ನೀಡಿದರು.



ಶ್ರೀಶ್ರೀಗಳವರಿಂದ ಗಣಕೀಕರಣ ಯಂತ್ರ ಉದ್ಘಾಟನೆ

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ರಾಜ್ಯ ಪಟ್ಟಣ ಸಹಕಾರ ಬ್ಯಾಂಕುಗಳ ಮಹಾಮಂಡಳಿಯ ಅಧ್ಯಕ್ಷರಾದ ಶ್ರೀ ಎಚ್.ಕೆ. ಪಾಟೀಲರು ಪ್ರಗತಿ ಸಹಕಾರ ಬ್ಯಾಂಕ್ ತನ್ನ ಬೆಳ್ಳಿಹಬ್ಬ ಆಚರಿಸುತ್ತಿರುವುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿ ಬ್ಯಾಂಕ್ ಸಾಲ ಕೊಡುವುದರ ಜೊತೆಗೆ ಸಾಲ ಮರುಪಾವತಿಯಾಗುವಂತೆ ನೋಡಿಕೊಳ್ಳಬೇಕು. ಬ್ಯಾಂಕ್ ಮತ್ತಷ್ಟು ಸಂಪನ್ಮೂಲಗಳನ್ನು ರೂಢಿಸಿಕೊಂಡು ಅಭಿವೃದ್ಧಿಪಥದಲ್ಲಿ ಸಾಗಲಿ; ಬ್ಯಾಂಕ್‌ನ ಗ್ರಾಹಕರು ಇದರ ಸದುಪಯೋಗವನ್ನು ಪಡೆದುಕೊಳ್ಳುವಂತಾಗಲಿ ಎಂದು ಶುಭ ಹಾರೈಸಿದರು.



ಸಮಾರಂಭಕ್ಕೆ ಶ್ರೀಶ್ರೀಗಳವರನ್ನು ಬರಮಾಡಿಕೊಳ್ಳುತ್ತಿರುವುದು

ಇದೇ ಸಂದರ್ಭದಲ್ಲಿ ಬ್ಯಾಂಕ್‌ನ ಪ್ರಗತಿಗೆ ಕಾರಣರಾದ ಗಣ್ಯರನ್ನು ಶ್ರೀ ಎಚ್.ಕೆ. ಪಾಟೀಲ್ ಅವರು ಶಾಲು ಹೊದಿಸಿ ನೆನಪಿನ ಕಾಣಿಕೆ ನೀಡಿ ಸನ್ಮಾನಿಸಿದರು. ಪರಮಪೂಜ್ಯ ಶ್ರೀಶ್ರೀಗಳವರು ಶ್ರೀ ಎಚ್.ಕೆ. ಪಾಟೀಲ ಅವರಿಗೆ ಶಾಲು ಹೊದಿಸಿ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು.

ಬೆಳ್ಳಿಹಬ್ಬದ ಅಂಗವಾಗಿ ಬ್ಯಾಂಕ್‌ನ ಸಿಬ್ಬಂದಿಯವರಿಗಾಗಿ ಏರ್ಪಡಿಸಿದ್ದ ಕ್ರೀಡಾಸ್ಪರ್ಧೆಯಲ್ಲಿ ವಿಜೇತರಾದವರಿಗೆ ಪರಮಪೂಜ್ಯ ಶ್ರೀಶ್ರೀಗಳವರು ಬಹುಮಾನ ನೀಡಿ ಆಶೀರ್ವದಿಸಿದರು.

ಸಮಾರಂಭ ಶ್ರೀಮತಿ ಸುಶೀಲ ಅವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಆರ್.ಸಿ. ಚನ್ನಬಸವಯ್ಯ ಅವರು ಸ್ವಾಗತಿಸಿದರು. ಕರ್ನಾಟಕ





ಕಿಕ್ಕಿರಿದ ಪ್ರೇಕ್ಷಕರು

ಗ್ಯಾಜೆಟಿಯರ್‌ನ ನಿವೃತ್ತ ಮುಖ್ಯ ಸಂಪಾದಕರು ಹಾಗೂ ಬ್ಯಾಂಕ್‌ನ ಕಾರ್ಯನಿರ್ವಾಹಕ ನಿರ್ದೇಶಕರೂ ಆದ ಶ್ರೀ ಎಂ.ಬಿ. ಪಾಟೀಲರು ಅತಿಥಿಗಳ ಪರಿಚಯ ಹಾಗೂ ಬ್ಯಾಂಕ್ ಬಗ್ಗೆ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಎಚ್. ಸಿ. ಷಡಕ್ಷರಪ್ಪ ಅವರು ವಂದಿಸಿದರು.

'ಮಹಾಮನೆ' ಸಂಪಾದಕ ಶ್ರೀ ಎಚ್. ಎಸ್. ಸಿದ್ಧಗಂಗಪ್ಪ ಅವರು ಕಾರ್ಯಕ್ರಮ ನಿರೂಪಿಸಿದರು. ಸಮಾರಂಭ ಅಂಗವಾಗಿ ಶ್ರೀಮತಿ ಕಸ್ತೂರಿ ಶಂಕರ್ ಮತ್ತು ವೃಂದದವರಿಂದ ಸುಗಮ ಸಂಗೀತ ಕಾರ್ಯಕ್ರಮ ಏರ್ಪಡಿಸಲಾಗಿತ್ತು.

ವರದಿ : ನಿರಂಜನಮೂರ್ತಿ




ಇತ್ತೀಚೆಗೆ ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ನಡೆದ ಸಮಾರಂಭದಲ್ಲಿ ಪರಮಪೂಜ್ಯ ಶ್ರೀಶ್ರೀಗಳವರು ಬೆಂಗಳೂರಿನ ಐ.ಐ.ಎ.ಎಮ್.ನಲ್ಲಿ ಪ್ರಾಧ್ಯಾಪಕರಾಗಿರುವ ಶ್ರೀ ಎಸ್. ಸಡಗೋಪನ್ ಅವರಿಗೆ ಶಾಲು ಹೊದಿಸಿ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸುತ್ತಿರುವುದು.





## ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ

# ಮೊದಲ ವರ್ಷದ ವಿದ್ಯಾರ್ಥಿಗಳಿಗೆ ಸ್ವಾಗತ ಸಮಾರಂಭ



ಪರಮಪೂಜ್ಯ ಶ್ರೀಶ್ರೀಗಳವರು ಆಶೀರ್ವಚನ ನೀಡುತ್ತಿರುವುದು.
ಚಿತ್ರದಲ್ಲಿ ಪ್ರಾಚಾರ್ಯರಾದ ಶ್ರೀ ಎಂ.ಎನ್. ಚನ್ನಬಸಪ್ಪ ಅವರನ್ನು ಕಾಣಬಹುದು.



ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು



ಗಣೇಶನ ಹಬ್ಬದ ಸಂದರ್ಭದಲ್ಲಿ ಕಡುಬಿನ ಸಿದ್ಧತೆಯಲ್ಲಿ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು



ಪ್ರಸಾದಕ್ಕೆ ಸಿದ್ಧವಾಗಿರುವ ಕಡುಬಿನ ರಾಶಿ





## ಶ್ರೀಕ್ಷೇತ್ರದಲ್ಲಿ ಶಿಕ್ಷಕರ ದಿನಾಚರಣೆ

# ಆತ್ಮಸಾಕ್ಷಿಯಾಗಿ ಕರ್ತವ್ಯ ನಿರ್ವಹಿಸಲು ಶ್ರೀಶ್ರೀಗಳ ಕರೆ




ಪರಮಪೂಜ್ಯ ಶ್ರೀಶ್ರೀಗಳವರಿಂದ ಅನುಗ್ರಹ ಭಾಷಣ. ವೇದಿಕೆಯಲ್ಲಿ ಕಿರಿಯ ಶ್ರೀಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಪ್ರೊ. ಹೆಚ್.ವಿ. ವೀರಭದ್ರಯ್ಯ, ಕುಮಾರಿ ಬಿ. ಬಿ. ಕಾವೇರಿ, ಶ್ರೀ ಪಿ. ಈಶ್ವರ ಭಟ್ ಹಾಗೂ ಶ್ರೀ ಹೆಚ್.ಸಿ. ನಾಗರಾಜ ಅವರು ಉಪಸ್ಥಿತರಿದ್ದರು.

"ಸರಳಜೀವನ, ಉನ್ನತ ಚಿಂತನೆ, ಅದ್ಭುತ ಸ್ಮರಣಶಕ್ತಿಯುಳ್ಳ ಮಹಾತತ್ವಜ್ಞಾನಿ, ಚಾರಿತ್ರ್ಯ ಶುದ್ಧಿಯ ಶ್ರೇಷ್ಠ ಶಿಕ್ಷಕ ಶ್ರೀ ಎಸ್. ರಾಧಾಕೃಷ್ಣನ್ ಅವರಂತಹ ಶಿಕ್ಷಕ ಪರಂಪರೆ ವಿರಳವಾಗುತ್ತಿದ್ದು, ಮಾನವೀಯ ಮೌಲ್ಯಗಳು ನಶಿಸುತ್ತಿವೆ" ಎಂದು ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ವಿಷಾದಿಸಿದರು.

ದಿನಾಂಕ ೨೮.೯.೧೯೯೯ರಂದು ಶ್ರೀ ಸಿದ್ಧಗಂಗಾ ಮಠದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಏರ್ಪಡಿಸಲಾಗಿದ್ದ ಶಿಕ್ಷಕರ ದಿನಾಚರಣೆಯ ದಿವ್ಯ ಸಾನಿಧ್ಯ ವಹಿಸಿ ಆಶೀರ್ವಚನ ನೀಡಿದ ಶ್ರೀ ಶ್ರೀಗಳವರು "ಜಗತ್ತು ಇಂದು ವಿನಾಶದ ಅಂಚಿನಲ್ಲಿದೆ. ಈ ಪರಿಸ್ಥಿತಿಯಲ್ಲಿ ಜಗತ್ತನ್ನು ರಕ್ಷಿಸಲು ತಾಯಿ ಮತ್ತು ಶಿಕ್ಷಕರಿಂದ ಮಾತ್ರ ಸಾಧ್ಯ. ನಿರಂತರ ಪ್ರಯತ್ನ, ಚಿಂತನೆ ಮತ್ತು ಅಧ್ಯಯನ ಮಾಡಬೇಕು, ಆತ್ಮಸಾಕ್ಷಿಗೆ ಅನುಗುಣವಾಗಿ ಕರ್ತವ್ಯ ನಿರ್ವಹಿಸಿ ಉತ್ತಮ ಶಿಕ್ಷಕನಾಗಬೇಕು" ಎಂದು ಕರೆಯಿತ್ತರು.

ಶ್ರೀಕ್ಷೇತ್ರದ ಕಿರಿಯ ಶ್ರೀಗಳಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಶ್ರೀಕ್ಷೇತ್ರದ ವಿದ್ಯಾಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸಿ ನಿವೃತ್ತರಾದ ಶಿಕ್ಷಕರು ಹಾಗೂ 'ಡಿ' ಗ್ರೂಪ್

ನೌಕರರು ಸೇರಿದಂತೆ ೧೩ ಜನರನ್ನು ಸನ್ಮಾನಿಸಿ ತಮ್ಮ ಅನುಗ್ರಹ ಭಾಷಣದಲ್ಲಿ "ಶಿಕ್ಷಕರು ಮುಂದಿನ ಪೀಳಿಗೆಯನ್ನು ತಯಾರು ಮಾಡುವ ಕೆಲಸವನ್ನು ಮಾಡುತ್ತಿದ್ದಾರೆ. ಶಿಕ್ಷಕರನ್ನು ಸನ್ಮಾನಿಸುವುದು ಒಳ್ಳೆಯ ಸಂಪ್ರದಾಯ" ಎಂದು ನುಡಿದರು.

ತುಮಕೂರಿನ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯ ಪ್ರಾಂಶುಪಾಲರಾದ ಶ್ರೀ ಪಿ. ಈಶ್ವರ ಭಟ್ ಹಾಗೂ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಹೆಚ್.ಸಿ. ನಾಗರಾಜ ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ತುಮಕೂರು ಉಪವಿಭಾಗದ ಉಪ ವಿಭಾಗಾಧಿಕಾರಿಗಳಾದ ಕುಮಾರಿ ಬಿ.ಬಿ. ಕಾವೇರಿ ಅವರು ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ಶ್ರೀಕ್ಷೇತ್ರದ ಸಿದ್ದಲಿಂಗೇಶ್ವರ ಸಂಸ್ಕೃತ ಕಾಲೇಜಿನಲ್ಲಿ ಕನ್ನಡ ಪಂಡಿತ್ ವಿಭಾಗದಲ್ಲಿ ಉಪನ್ಯಾಸಕರಾಗಿರುವ ಪಂಡಿತ್ ಎಂ. ಈಶ್ವರಪ್ಪನವರು ಬರೆದಿರುವ




ಉಪ ವಿಭಾಗಾಧಿಕಾರಿ ಕುಮಾರಿ ಬಿ. ಬಿ. ಕಾವೇರಿ ಅವರು ಮಾತನಾಡುತ್ತಿರುವುದು.

---

'ಕನ್ನಡ ವ್ಯಾಕರಣ ಕೈಪಿಡಿ' ಕೃತಿಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬಿಡುಗಡೆ ಮಾಡಿದರು. ಕೃತಿಯನ್ನು ಸಿದ್ಧಗಂಗಾ ಪತ್ರಿಕೆಯ ಸಂಪಾದಕ ಪ್ರೊ. ಹೆಚ್. ವಿ. ವೀರಭದ್ರಯ್ಯನವರು ಪರಿಚಯ ಮಾಡಿಕೊಟ್ಟರು.

ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆಯ ಅಧೀಕ್ಷಕರಾದ ಶ್ರೀ ಎಸ್. ಶಿವಕುಮಾರ್‌ರವರು ಸ್ವಾಗತಿಸಿದರು, ಶ್ರೀ ಬಿ. ಎಸ್. ಮಲ್ಲಿಕಾರ್ಜುನ, ವಂದಿಸಿದರು. ಶ್ರೀಮತಿ ಆರ್. ಎಂ. ರಾಜಸುಲೋಚನ ರವರು ಕಾರ್ಯಕ್ರಮ ನಿರೂಪಿಸಿದರು.

## ಮಹಾತ್ಮ ಗಾಂಧೀಜಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರಿ ಜಯಂತಿ





"ಮಹಾತ್ಮರು ಕಂಡ ಕನಸು, ಅವರ ಆದರ್ಶಗಳು, ಅವರ ತತ್ವಗಳು, ಇಂದು ಕಣ್ಮರೆ ಯಾಗುತ್ತಿದ್ದು ದೇಶ ವಿನಾಶದ ಅಂಚಿನಲ್ಲಿ ಸಾಗು ತ್ತಿದೆ" ಎಂದು ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಆತಂಕ ವ್ಯಕ್ತಪಡಿಸಿದರು. ದಿನಾಂಕ ೨.೧೦.೧೯೯೯ ರಂದು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಏರ್ಪಡಿಸಲಾಗಿದ್ದ ಮಹಾತ್ಮ ಗಾಂಧೀಜಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರಿ ಜಯಂತಿ ಸಮಾರಂಭದ ದಿವ್ಯ ಸಾನಿಧ್ಯ ವಹಿಸಿ ಆಶೀರ್ವಚನ ನೀಡುತ್ತಿದ್ದ ಶ್ರೀಶ್ರೀಗಳವರು "ಗಾಂಧೀಜಿಯವರು ಪ್ರತಿಪಾದಿಸಿದ ಮೂಲ ಶಿಕ್ಷಣ, ಸ್ವಾವಲಂಬನೆಯ ದುಡಿಮೆ, ಸತ್ಯ ಮತ್ತು ನೈತಿಕ ಶಕ್ತಿಯನ್ನು ಜೀವನದಲ್ಲಿ ರೂಢಿಸಿಕೊಳ್ಳಬೇಕು" ಎಂದು ಕರೆಯಿತ್ತರು.

ತುಮಕೂರು ಜಿಲ್ಲಾ ರೋಟರಿ ಅಧ್ಯಕ್ಷರಾದ ಶ್ರೀ ಟಿ.ಎಂ. ಸ್ವಾಮಿ ಅಧ್ಯಕ್ಷತೆ ವಹಿಸಿದ್ದರು. ಸರ್ವೋತ್ತಮ ಆಚಾರ್ಯ ಪ್ರಶಸ್ತಿ ವಿಜೇತರಾದ ಖ್ಯಾತ ಸಾಹಿತಿ ಶ್ರೀ ಕವಿತಾಕೃಷ್ಣ ಅವರು ವಿಶೇಷ ಉಪನ್ಯಾಸವನ್ನು ನೀಡಿದರು. ಶ್ರೀ ಎಸ್. ಶಿವ ಕುಮಾರ್ ಸ್ವಾಗತಿಸಿದರು. ಶ್ರೀಮತಿ ರಾಜಸುಲೋಚನ ಅವರು ವಂದನೆ ಸಲ್ಲಿಸಿದರು. ಶ್ರೀ ಕಲ್ಲಪ್ಪನವರು ಕಾರ್ಯಕ್ರಮವನ್ನು ನಿರೂಪಿಸಿದರು.

"ಸತ್ಯವನ್ನು ಸಂಪೂರ್ಣವಾಗಿ ಕಂಡುಕೊಳ್ಳುವುದೆಂದರೆ ನಮ್ಮನ್ನೇ ನಾವು ಅರಿತುಕೊಂಡಂತೆ"

- ಮಹಾತ್ಮ ಗಾಂಧೀಜಿ





## ಶ್ರೀ ಸಿದ್ಧಗಂಗಾ ಕೈಗಾರಿಕಾ ಮತ್ತು ತರಬೇತಿ ಸಂಸ್ಥೆಯ ಉದ್ಘಾಟನಾ ಸಮಾರಂಭ

"ತಂತ್ರಜ್ಞಾನ ಯುಗದಲ್ಲಿ ಎಲ್ಲಾ ಅವಕಾಶಗಳಿದ್ದರೂ ಸಹ ಅದನ್ನು ಸಮರ್ಥವಾಗಿ ಬಳಸಿಕೊಂಡು ಸಮರ್ಥರಾದ ತಂತ್ರಜ್ಞಾನಿಗಳಾಗುವವರ ಸಂಖ್ಯೆ ತುಂಬ ಕಡಿಮೆ ಇದೆ" ಎಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ವಿಷಾದಿಸಿದರು.

ತಾ. ೬.೧೦.೧೯೯೯ರಂದು ತುಮಕೂರಿನ ಬಟವಾಡಿಯಲ್ಲಿರುವ ಶ್ರೀ ಸಿದ್ಧಗಂಗಾ ಪಾಲಿಟೆಕ್ನಿಕ್ ಆವರಣದಲ್ಲಿ ಸ್ಥಾಪನೆಯಾದ ಶ್ರೀ ಸಿದ್ಧಗಂಗಾ ಕೈಗಾರಿಕಾ ತರಬೇತಿ ಸಂಸ್ಥೆಯ ಉದ್ಘಾಟನಾ ಸಮಾರಂಭದ ದಿವ್ಯ ಸಾನಿಧ್ಯ ವಹಿಸಿ ಪರಮ ಪೂಜ್ಯರು ಆಶೀರ್ವಚನ ನೀಡುತ್ತಿದ್ದರು. ''ಈ ಸ್ಪರ್ಧಾತ್ಮಕ ಯುಗದಲ್ಲಿ ಇರುವ ಅವಕಾಶಗಳನ್ನು ಸೂಕ್ತವಾಗಿ ಬಳಸಿಕೊಂಡು ಹೆಚ್ಚು ವ್ಯಾಸಂಗ ಮಾಡಿ ರಾಷ್ಟ್ರದ ಅಭಿವೃದ್ಧಿಗೆ ಶ್ರಮಿಸಬೇಕು'' ಎಂದು ಶ್ರೀಶ್ರೀಗಳವರು ಕರೆ ನೀಡಿದರು.

ಈ ಸಮಾರಂಭದಕ್ಕೆ ಶ್ರೀ ಸಿದ್ಧಗಂಗಾಮಠದ ಆಡಳಿತಾಧಿಕಾರಿಗಳಾದ ಶ್ರೀ ಪುಟ್ಟಶಂಕರಯ್ಯನವರು, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಶಿಕ್ಷಣಾಧಿಕಾರಿಗಳಾದ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯ ನವರು ಹಾಗೂ ಶ್ರೀ ಬಿ. ಗಂಗಾಧರಯ್ಯ ನವರು, ಶ್ರೀ ಕೆ.ಸಿ. ಶಿವಗಂಗಯ್ಯನವರು, ಶ್ರೀ ವಿಶ್ವನಾಥಯ್ಯ ನವರು ಆಗಮಿಸಿದ್ದರು. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪನವರು ಸ್ವಾಗತಿಸಿ ''ಶ್ರೀ ಸಿದ್ಧಗಂಗಾ ಸಂಸ್ಥೆಯ ವತಿಯಿಂದ ಸ್ಥಾಪನೆಯಾದ ಈ ತರಬೇತಿ ಸಂಸ್ಥೆಯು ಗ್ರಾಮೀಣ ವಿದ್ಯಾರ್ಥಿಗಳಿಗೆ ಆಶಾಕಿರಣವಾಗಿದೆ'' ಎಂದರು. ಶ್ರೀ ಸಿದ್ಧಗಂಗಾ ಪಾಲಿಟೆಕ್ನಿಕ್ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಕೆ.ಎಂ. ಚಂದ್ರಶೇಖರ್ ಅವರು ವಂದನೆ ಸಲ್ಲಿಸಿದರು. ಶ್ರೀ ಎನ್. ರೇಣುಕಾರಾಧ್ಯರವರು ಕಾರ್ಯಕ್ರಮವನ್ನು ನಿರೂಪಿಸಿದರು.

## ಆಂಗ್ಲ ಭಾಷಾ ಪುನಶ್ಚೇತನ ತರಬೇತಿ ಕಾರ್ಯಾಗಾರ

ದಿನಾಂಕ ೭.೧೦.೧೯೯೯ ರಿಂದ ೮.೧೦.೧೯೯೯ ರವರೆಗೆ ಎರಡು ದಿನಗಳ ಕಾಲ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಪ್ರೌಢಶಾಲೆಗಳಲ್ಲಿ ಆಂಗ್ಲ ಭಾಷೆಯನ್ನು ಬೋಧಿಸುತ್ತಿರುವ ಅಧ್ಯಾಪಕರಿಗೆ ಆಂಗ್ಲಭಾಷಾ ಪುನಶ್ಚೇತನ ತರಬೇತಿ ಕಾರ್ಯಾಗಾರವನ್ನು ಶ್ರೀ ಕ್ಷೇತ್ರದಲ್ಲಿ ಏರ್ಪಡಿಸಲಾಗಿತ್ತು. ದಿನಾಂಕ ೭.೧೦.೧೯೯೯ರಂದು ಈ ಕಾರ್ಯಾಗಾರವನ್ನು ಉದ್ಘಾಟಿಸಿದ ಶ್ರೀಕ್ಷೇತ್ರದ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಾ, "ಎಷ್ಟೇ ಪಾಂಡಿತ್ಯ ಶೀಲರಾದರೂ ಕೂಡ ಭಾಷಾ ವಿಷಯದಲ್ಲಿ ವ್ಯಾಕರಣವನ್ನು ಮಕ್ಕಳಿಗೆ ಸಮರ್ಥವಾಗಿ ಬೋಧನೆ ಮಾಡಲು ಪುನಶ್ಚೇತನ ತುಂಬಾ ಅವಶ್ಯವಾಗಿದೆ. ಅದನ್ನು ನೀವು ಸದುಪಯೋಗಪಡಿಸಿಕೊಳ್ಳಬೇಕು" ಎಂದು ಅಧ್ಯಾಪಕರಿಗೆ ಕರೆಯಿತ್ತರು.

ಆಂಗ್ಲಭಾಷೆಯ ವ್ಯಾಕರಣಕ್ಕೆ ಸಂಬಂಧಪಟ್ಟಂತೆ ಉಪನ್ಯಾಸ ನೀಡಲು ಆಂಗ್ಲ ಭಾಷಾ ಸಂಪನ್ಮೂಲ ವ್ಯಕ್ತಿಗಳಾದ ತುಮಕೂರಿನ ಶ್ರೀ ಸಿದ್ಧಗಂಗಾ ಹೈಸ್ಕೂಲಿನ ನಿವೃತ್ತ ಶಿಕ್ಷಕರಾದ ಶ್ರೀ ಎನ್. ಗುರುಮೂರ್ತಿ, ಕೆ.ಎಸ್.ಇ.ಎಸ್. ಮಹಾವಿದ್ಯಾಲಯದ ಉಪನ್ಯಾಸಕಿ ಶ್ರೀಮತಿ ಕೆ.ಸಿ. ಹೇಮಲತ, ನಿವೃತ್ತ ಉಪನ್ಯಾಸಕ ರಾದ ಆಂಜನೇಯರವರು ಹಾಗೂ ಸಿದ್ಧಗಂಗಾ ಕಾಲೇಜಿನ ಉಪನ್ಯಾಸಕರಾದ ಶ್ರೀ ಎಂ.ಬಿ. ಸದಾಶಿವಯ್ಯನವರನ್ನು ಆಹ್ವಾನಿಸಲಾಗಿತ್ತು. ಇವರೆಲ್ಲರು ವ್ಯಾಕರಣದ ಬಗ್ಗೆ ಸರಳವಾಗಿ, ಮನಮುಟ್ಟುವಂತೆ ಉಪನ್ಯಾಸ ನೀಡಿದರು. ಈ ಕಾರ್ಯಕ್ರಮವನ್ನು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಶಿಕ್ಷಣಾಧಿಕಾರಿಗಳಾದ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ಹಾಗೂ ಶ್ರೀ ಟಿ.ಎಸ್. ರಾಮಚಂದ್ರರಾವ್‌ರವರು ವ್ಯವಸ್ಥೆ ಮಾಡಿದ್ದರು. ಈ ಕಾರ್ಯಾಗಾರದಲ್ಲಿ ಶ್ರೀ ಸಂಸ್ಥೆಯ ಎಲ್ಲಾ ಪ್ರೌಢಶಾಲೆಗಳ ಆಂಗ್ಲ ಭಾಷಾ ಶಿಕ್ಷಕರು ಆಗಮಿಸಿದ್ದರು. ಆಡಳಿತಾಧಿಕಾರಿಗಳಾದ ಶ್ರೀ ಪುಟ್ಟಶಂಕರಯ್ಯನವರು ಸಹ ಆಗಮಿಸಿ ಶಿಕ್ಷಕರಿಗೆ ಹಿತವಚನ ನೀಡಿದರು.

**ವರದಿ : ಕೆ.ಬಿ. ಶಿವಶಂಕರಯ್ಯ**

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಕಳೆದ ಸಂಚಿಕೆಯಿಂದ)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 158. | **ಶ್ರೀ ಹೆಚ್. ಎಸ್. ಶಿವರುದ್ರಯ್ಯ**<br>ನಿವೃತ್ತ ಶಿಕ್ಷಕರು,<br>ಪುರುಷನಹಳ್ಳಿ,<br>ದೊಡ್ಡಬಳ್ಳಾಪುರ ತಾಲ್ಲೋಕು.<br>ಬೆಂಗಳೂರು ಗ್ರಾಮಾಂತರ ಜಿಲ್ಲೆ | 1001-00 |
| 159. | **ಶ್ರೀ ಎ.ಬಸಪ್ಪ**<br>ನಿವೃತ್ತ ಶಿಕ್ಷಕರು, ಕಟ್ಟೆ ಬೆಲಗುಲಿ,<br>ಬಾಗಿವಾಲು ಅಂಚೆ,<br>ಹೊಳೆನರಸೀಪುರ ತಾಲ್ಲೂಕು.<br>ಹಾಸನ ಜಿಲ್ಲೆ. | 1001-00 |
| 160. | **ಶ್ರೀ ಬಿ.ಎಂ. ಪರಮೇಶ್ವರಪ್ಪ**<br>ಕಾರ್ಯಪಾಲಕ ಅಭಿಯಂತರರು,<br>ಬಾಸೂರು,<br>ಬೀರೂರು ಮಾರ್ಗ,<br>ಕಡೂರು,<br>ಚಿಕ್ಕಮಗಳೂರು ಜಿಲ್ಲೆ. | 1001-00 |
| 161. | **ಶ್ರೀ ಕೆ.ಪಿ. ಗಂಗಾಧರಯ್ಯ**<br>ನಂ. 2223,<br>ಎಂ.ಜಿ. ರಸ್ತೆ, ಕನಕಪುರ<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | 1001-00 |
| 162. | **ಶ್ರೀ ಕೆ. ಕರಿಯಪ್ಪ,**<br>ಜಮೀನ್ದಾರರು,<br>ಕೊಡಿಗೇಹಳ್ಳಿ ಅಂಚೆ,<br>ತುರುವೇಕೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ. | 1001-00 |
| 163. | **ಶ್ರೀ ನಿಂಗಪ್ಪ ಕೆ. ಹಡಪದ,**<br>ನಂ. 25, 11ನೇ ಮುಖ್ಯರಸ್ತೆ,<br>39ನೇ ಎ ಕ್ರಾಸ್,<br>4ನೇ ಟಿ. ಬಡಾವಣೆ,<br>ಜಯನಗರ,<br>ಬೆಂಗಳೂರು-560 004. | 1101-00 |
| 164. | **ಶ್ರೀ ಟಿ.ಎನ್. ರಾಮಕೃಷ್ಣಯ್ಯ**<br>**ಮತ್ತು**<br>**ಶ್ರೀಮತಿ ಟಿ.ಬಿ. ಸರಸ್ವತಮ್ಮ**<br>'ದಿವ್ಯಶ್ರೀ', ಕುವೆಂಪು ರಸ್ತೆ,<br>ರಾಘವೇಂದ್ರನಗರ,<br>ತುಮಕೂರು-2. | 1108-00 |
| 165. | **ಶ್ರೀ ಅನಂತ ಪಡುಬಿದ್ರಿ,**<br>ನಂ. 8, ಮೊದಲ ಮಹಡಿ,<br>ಸಪ್ನಾ ಆರುಖಾದ್ ಚೌಕ್,<br>ಕರೇಗಾಂ ಕಲ್ವ, ಠಾಣೆ-400 005<br>ಮಹಾರಾಷ್ಟ್ರ | 1001-00 |
| 166. | **ಶ್ರೀ ಶಿವಣ್ಣ**<br>**ಮತ್ತು**<br>**ಶ್ರೀಮತಿ ಲೀಲಾವತಿ,**<br>ಜೆ.ಸಿ. ಕೆಮಿಕಲ್ ಇಂಜಿನೀಯರಿಂಗ್ ವಿಭಾಗ,<br>ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ,<br>ತುಮಕೂರು. | 1001-00 |
| 167. | **ಶ್ರೀ ಶ್ರೀ ಶಿವಬಸವ ಸ್ವಾಮಿಗಳು,**<br>ಅಧ್ಯಕ್ಷರು, ದೊಡ್ಡಮಠ,<br>ಅಕ್ಕಿಪೇಟೆ,<br>ಬೆಂಗಳೂರು-560 053. | 1001-00 |
| 168. | **ಶ್ರೀ ಲಿಂಗದೇವರಪ್ಪ,**<br>ನಂ. 627, ಸಿ-10 ಮುಖ್ಯರಸ್ತೆ,<br>6ನೇ ಬ್ಲಾಕ್,<br>ರಾಜಾಜಿನಗರ,<br>ಬೆಂಗಳೂರು-560 010. | 1001-00 |
| 169. | **ಶ್ರೀ ಸಿ.ಬಿ. ರಾಜಶೇಖರಯ್ಯ,**<br>ನಿವೃತ್ತ ಶಿಕ್ಷಕರು,<br>ನಂ. 252, ಮೊದಲನೇ ಕ್ರಾಸ್,<br>ನೆಹರೂ ನಗರ,<br>ಮಂಡ್ಯ-571 401. | 1001-00 |

(ಮುಂದುವರಿಯುತ್ತದೆ)





## ಮಹಾದಾಸೋಹ ನಿಧಿಗೆ 1101 ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 108. | **ಶ್ರೀ ಡಿ.ಎನ್. ಶ್ರೀಕಂಠಪ್ಪ,**<br>**ರೇವಮ್ಮ ಪುಷ್ಪವತಿ,**<br>ನಂ. 19, ಪಾರ್ಕ್ ರಸ್ತೆ,<br>ಬೆಂಗಳೂರು-53. | 1,101-00 |
| 109. | **ಶ್ರೀ ಜಿ.ಎಸ್. ಶಿವಣ್ಣ**<br>ನಂ. 3, ಯಲಚೇನಹಳ್ಳಿ,<br>'ಬಸವೇಶ್ವರ ನಿಲಯ', ಜೆ.ಪಿ. ನಗರ,<br>ಮೈಸೂರು-560 078. | 1,101-00 |
| 110. | **ಶ್ರೀ ಬಿ.ಎಂ. ಪರಮೇಶ್ವರಪ್ಪ,**<br>ಕಾರ್ಯನಿರ್ವಾಹಕ ಅಭಿಯಂತರರು,<br>ಬಸೂರು ಅಂಚೆ, ಮಾರ್ಗ ಬಿರೂರು,<br>ಕಡೂರು ತಾಲ್ಲೂಕು,<br>ಚಿಕ್ಕಮಗಳೂರು ಜಿಲ್ಲೆ. | 1,101-00 |
| 111. | **ಶ್ರೀ ರಂಗಣ್ಣ, ಮುದ್ದವೀರಮ್ಮ ಮತ್ತು ಮಕ್ಕಳು**<br>ಹನುಮಂತನಹಳ್ಳಿ, ಬಸವನಹಳ್ಳಿ ಅಂಚೆ,<br>ಅಮರಾಪುರ ಮಂಡಲ, ಮಡಕಶಿರಾ ತಾಲ್ಲೂಕು,<br>ಆಂಧ್ರಪ್ರದೇಶ. | 1,101-00 |
| 112. | **ಶ್ರೀ ಕೆ. ಚನ್ನಯ್ಯ, ಕರಿಯಮ್ಮ**<br>ಸೋಮಸಾಗರ, ಮಣ್ಣೆ ಅಂಚೆ,<br>ನೆಲಮಂಗಲ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | 10,000-00 |
| 113. | **ಶ್ರೀ ನಂಜಪ್ಪ**<br>ಕೆಂಬಳಿಗನಹಳ್ಳಿ, ನಾಡಗುಡಿ ಹೋಬಳಿ,<br>ಹೊಸಕೋಟೆ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | 3,200-00 |
| 114. | **ಶ್ರೀಮತಿ ದೇವಮ್ಮ ಬಸವರಾಜ ಕಮ್ಮಾರ್**<br>ನಿವೃತ್ತ ಶಿಕ್ಷಕರು, ತಿಗಡಿಗಲ್ಲಿ,<br>ಬೈಲಹೊಂಗಲ ಅಂಚೆ,<br>ಬೈಲಹೊಂಗಲ-591 102. | 1,101-00 |
| 115. | **ಶ್ರೀ ಟಿ.ಎನ್. ರಾಮಕೃಷ್ಣಯ್ಯ ಮತ್ತು**<br>**ಶ್ರೀಮತಿ ಟಿ.ಬಿ. ಸರಸ್ವತಮ್ಮ**<br>'ದಿವ್ಯಶ್ರೀ', ಕುವೆಂಪು ರಸ್ತೆ,<br>ರಾಘವೇಂದ್ರ ನಗರ, ತುಮಕೂರು-572 102. | 1,101-00 |
| 116. | **ಶ್ರೀ ಪ್ರಶಾಂತ್ ಮತ್ತು ಶ್ರೀ ಡಿ.ಎಸ್. ಪಶುಪತಿ**<br>ನಂ. 19, ಪಾರ್ಕ್ ರಸ್ತೆ,<br>ಬೆಂಗಳೂರು-560 053. | 1,101-00 |
| 117. | **ಶ್ರೀ ಶಿವಣ್ಣ ಮತ್ತು ಶ್ರೀಮತಿ ಜೆ.ಸಿ. ಲೀಲಾವತಿ**<br>ಕೆಮಿಕಲ್ ಇಂಜಿನೀಯರಿಂಗ್ ವಿಭಾಗ,<br>ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ,<br>ತುಮಕೂರು-572 103. | 1,101-00 |
| 118. | **ಶ್ರೀ ಎಂ. ಶಿವಸ್ವಾಮಿ,**<br>ಮಾಲೀಕರು, ಶ್ರೀ ಶಿಂಷಾ ಎಲೆಕ್ಟ್ರಿಕಲ್ಸ್,<br>ಕಾಲೇಜು ರಸ್ತೆ, ಟಿ. ನರಸೀಪುರ, ಮೈಸೂರು ಜಿಲ್ಲೆ. | 1,101-00 |
| 119. | **ಶ್ರೀ ಪಿ. ಅನಂತ,**<br>ನಂ. 8, ಮೊದಲ ಮಹಡಿ,<br>ಸಪ್ನಾ ಅಪಾರ್ಟ್‌ಮೆಂಟ್ಸ್,<br>ಆರುಖಾದ್ ಚೌಕ್, ಕರೇಗಾಂವ್, ಕಲ್ವ,<br>ಠಾಣೆ-400 605, ಮಹಾರಾಷ್ಟ್ರ. | 1,101-00 |
| 120. | **ಶ್ರೀಮತಿ ದೇವಮ್ಮ ಇವರ ಮಗಳು**<br>**ಶ್ರೀಮತಿ ಸಿದ್ಧಗಂಗಮ್ಮ ಮತ್ತು ಕುಟುಂಬ,**<br>ನಂ. 7, ಹುಚ್ಚಪ್ಪ ಕಾಂಪೌಂಡ್,<br>ವಿನೋಬಾನಗರ, ತುಮಕೂರು-572 102. | 1,101-00 |
| 121. | **ಶ್ರೀ ಸಿದ್ದವೀರಪ್ಪ,**<br>ತೂಂಡಗೆರೆ, ಹೆಬ್ಬೂರು ಹೋಬಳಿ,<br>ತುಮಕೂರು ತಾಲ್ಲೂಕು. | 1,111-00 |
| 122. | **ಶ್ರೀ ಎಸ್.ಎಂ. ಪುಟ್ಟಮಾದಪ್ಪ,**<br>**ಮತ್ತು ಶ್ರೀಮತಿ ದೇವೀರಮ್ಮ**<br>ಶಿವನಹಳ್ಳಿ, ಕನಕಪುರ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | 5,005-00 |
| 123. | **ಶ್ರೀ ಕೆ. ನಾಗರಾಜ,**<br>ಬಿ.ಎಸ್.ಟಿ.ಓ.,<br>ಸಬ್‌ಟ್ರೆಜರಿ, ಹೊಸಕೋಟೆ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | 1,101-00 |
| 124. | **ಶ್ರೀ ಹೆಚ್.ವಿ. ಶಿವಪ್ಪ ಮತ್ತು**<br>**ಶ್ರೀಮತಿ ಹೆಚ್.ವಿ. ನಂಜಮ್ಮ**<br>ಹೇರುಂಡಮನೆ, 3ನೇ ಮುಖ್ಯರಸ್ತೆ,<br>ಚಾಮರಾಜಪೇಟೆ, ಬೆಂಗಳೂರು-560 018. | 4,500-00 |
| 125. | **ಶ್ರೀ ಎಂ. ನಂಜುಂಡಪ್ಪ**<br>ಕೇರಾಫ್ ಎಸ್.ಎನ್. ಟೇಲರ್ಸ್,<br>ಪೀಣ್ಯ 2ನೇ ಘಟ್ಟ, ಗಂಧದ ನಗರ ಮುಖ್ಯ ರಸ್ತೆ,<br>ವಿಶ್ವನೀಡಂ ಅಂಚೆ, ಬೆಂಗಳೂರು-560 091. | 1,101-00 |

(ಮುಂದುವರಿಯುತ್ತದೆ)

## ಕಡಿಮೆ ಹಣ ಖರ್ಚುಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಿರಿ.

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತ ವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

**ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ**

'ಕಸ್ತೂರಿ'
ನೀಲಂ ಬಾರ್ ಸೋಪ್

'ಕಸ್ತೂರಿ'
ನೀಲಂ ಬಾರ್ ಸೋಪ್

ರಾಮಕೃಷ್ಣ ಆಯಿಲ್ ಮಿಲ್, ತುಮಕೂರು

## ಆರಾಧ್ಯ ಅಂಡ್ ಆರಾಧ್ಯ ಬಿಲ್ಡರ್ಸ್ ಪ್ರೈ. ಲಿಮಿಟೆಡ್

21/2, ಆರಾಧ್ಯ ಕಾಂಪ್ಲೆಕ್ಸ್,
ವಾಣಿವಿಲಾಸ ರಸ್ತೆ,
ಬೆಂಗಳೂರು-560 004.

ದೂರವಾಣಿ :
ಕಛೇರಿ : 623773
ಮನೆ : 262455





## ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಅಕ್ಕಿಪೇಟೆ, ಬೆಂಗಳೂರು - 560 053. ✆ :2282224, 2871003.

**ಶಾಖೆಗಳು :**

ನಂ. 265/ಡಿ, ಕನಕಪುರ ಮುಖ್ಯ ರಸ್ತೆ, 7ನೇ ಬ್ಲಾಕ್, ಜಯನಗರ, ಬೆಂಗಳೂರು-82 ✆ : 6541983
ನಂ. 391/32, 12ನೇ ಮುಖ್ಯರಸ್ತೆ, 6ನೇ ವಿಭಾಗ, ಡಾ. ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-10. ✆ : 3402145
ನಂ. 32, ಎಂ.ಸಿ. ಬಡಾವಣೆ, ಎಂ.ಸಿ. ರಸ್ತೆ, ವಿಜಯನಗರ (ಬಸ್ ಸ್ಟಾಪ್ ಹತ್ತಿರ) ಬೆಂಗಳೂರು-560 040. ✆ : 3358017
ನಂ. 324, 8ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79. ✆ : 3485393.

- ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.
- ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ.
- ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ಠೇವಣಿಗಳ ಮೇಲೆ ವಾಣಿಜ್ಯ ಬ್ಯಾಂಕುಗಳಿಗಿಂತ ಶೇಕಡ ½ದಷ್ಟು ಅಧಿಕ ಬಡ್ಡಿ ದೊರೆಯುತ್ತದೆ. ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸುವ ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

*(30-11-1999ಕ್ಕೆ) (ಲಕ್ಷ ರೂ.ಗಳಲ್ಲಿ)*

| | | | |
|---|---|---|---|
| ಷೇರು ಬಂಡವಾಳ | 102.90 | ಹೂಡಿಕೆಗಳು | 1676.97 |
| ಸಾಲಗಳು ಮತ್ತು ಮುಂಗಡ | 1705.61 | ದುಡಿಯುವ ಬಂಡವಾಳ | 3587.85 |
| ಠೇವಣಿಗಳು | 3346.77 | ಕಾಯ್ದಿಟ್ಟ ಹಾಗೂ ಇತರೆ ನಿಧಿಗಳು | 138.18 |

ಶ್ರೀ ಆರ್. ನೀಲಕಂಠಯ್ಯ
ಅಧ್ಯಕ್ಷರು

ಶ್ರೀ ಎಲ್. ರಾಜಪ್ಪ
ಉಪಾಧ್ಯಕ್ಷರು

**ನಿರ್ದೇಶಕರು**

ಶ್ರೀ ಬಿ.ಎಸ್. ಪರಮಶಿವಯ್ಯ
ಶ್ರೀ ಬಿ.ಜಿ. ನಾಗಬಸಪ್ಪ
ಶ್ರೀ. ಜಿ. ಶಿವಕುಮಾರ್
ಶ್ರೀ ಆರ್.ಜಿ. ಶಿವಕುಮಾರ್
ಶ್ರೀ ಎನ್.ಎಸ್. ಶಿವಶಂಕರ್
ಶ್ರೀಮತಿ ಜಿ.ಎನ್. ಚಂದ್ರಾವತಿ ಬಿ.ಟಿ. ಉಮೇಶ್

ಶ್ರೀ ವೈ.ಟಿ. ಮಹಾದೇವಪ್ಪ
ಡಾ. ಮಲ್ಲಿಕಾರ್ಜುನ
ಶ್ರೀ ಬಿ.ಎಸ್. ಸಚ್ಚಿದಾನಂದಮೂರ್ತಿ
ಶ್ರೀ ಬಿ.ಎಸ್. ಬಾಲರಾಜ್
ಶ್ರೀ ಕೆ.ಆರ್. ರಾಮಯ್ಯ

ಪ್ರಧಾನ ವ್ಯವಸ್ಥಾಪಕರು
ಶ್ರೀ ಬಿ.ವಿ. ನಾಗರಾಜ

***Printed at : Geetanjali Printers, Bangalore-54***

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಕದಳಿ - ಮಹಿಳಾ ವೇದಿಕೆ ಏರ್ಪಡಿಸಿದ್ದ ರಾಜ್ಯಮಟ್ಟದ ಮಹಿಳಾ ಸಮಾವೇಶವನ್ನು ಅಕ್ಟೋಬರ್ ೩ ರಂದು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಕರ್ನಾಟಕ ವಿಧಾನ ಪರಿಷತ್ ಸದಸ್ಯರಾದ ಶ್ರೀಮತಿ ರಾಣಿ ಸತೀಶ್, ಅ. ಭಾ. ಶ. ಸಾ. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ನಾಡಿನ ಪ್ರಸಿದ್ಧ ವಿದ್ವಾಂಸರು, ಖ್ಯಾತ ಅಂಕಣಕಾರರೂ ಆದ ಶ್ರೀ ಎಚ್ಚೆಸ್ಕೆ ಅವರು ಇತ್ತೀಚೆಗೆ ಶ್ರೀಕ್ಷೇತ್ರಕ್ಕೆ ಭೇಟಿ ನೀಡಿ ಪೂಜ್ಯ ಶ್ರೀ ಶ್ರೀಗಳವರ ದರ್ಶನಾಶೀರ್ವಾದ ಪಡೆದು ಪ್ರಾರ್ಥನಾ ಸಭೆಯಲ್ಲಿ ವಿದ್ಯಾರ್ಥಿಗಳನ್ನುದ್ದೇಶಿಸಿ ಹಿತವಚನ ನೀಡಿದರು.